ಅಭಿನವ ಸಾಹಿತ್ಯಮಾಲಾ, ೧.

# ಕನ್ನಡದ ಕಿಡಿಗಳು

ಮುನ್ನುಡಿ ಬರೆದವರು:

ಪ್ರೊ. ವಿ. ಕೃ. ಗೋಕಾಕ, ಎಂ. ಎ., ಪುಣೆ

೧೯೩೪

ಸಂಚಾಲಕರು

**ಗೆಳೆಯರ ಗುಂಪು, ಹೈದರಾಬಾದ**

ಸಂಚಾಲಕರು:
**ಗೆಳೆಯರ ಗುಂಪು**
ಹೈದರಾಬಾದ ದಕ್ಷಿಣ

ಪ್ರಕಾಶಕರು:
**ರಾ. ಬ. ಜಾಗಿರದಾರ**
೨೮೮೦ ಗೌಳಿಗೂಡಾ
ಹೈದರಾಬಾದ (ದಕ್ಷಿಣ)

ಮುದ್ರಕರು:
**ಬಳವಂತ ನಾರಾಯಣ ಬಾಗಲವಾಡಿ**
ಮೋಹನ ಮುದ್ರಣಾಲಯ
ಧಾರವಾಡ

# ಪ ರಿ ವಿ ಡಿ

# ನಮ್ಮ ಪ್ರಧಾನಪೋಷಕರು

ಶ್ರೀ ರಾಜಾ ಕಾರವಾನಕರ ಶ್ರೀನಿವಾಸರಾಯರು

ಬಿ. ಎ. ಬಾರ್-ಆಟ್-ಲಾ, ಹೈದರಾಬಾದ.

,, ರಾಜಾ ಸ್ವಾಮಿರಾವ ದೇಸಾಯಿ,

ಮೇಣೇಧಾಳ ಸಂಸ್ಥಾನ.

,, ರಾಜಾ ಬಹದೂರ ಪಂಡಿತ ಗಿರಿರಾಯರು,

ಜಜ್' ಹೈಕೋರ್ಟ, ಹೈದರಾಬಾದ.

,, ಜನಾರ್ದನರಾವ ದೇಸಾಯಿ,

ವಕೀಲ, ಹೈಕೋರ್ಟ, ಹೈದರಾಬಾದ.

,, ಗುಡಗಂಟಿ ರಾಮಾಚಾರ್ಯ,

ವಕೀಲ, ಹೈದರಾಬಾದ.

,, ಭೀಮಾಚಾರ್ಯ ಚಿಮ್ಮಲಗಿ,

ಹೈದರಾಬಾದ.

# ಎರಡು ಮಾತು



ನಿಜಾಂ ಕರ್ನಾಟಕದಲ್ಲಿ ಕನ್ನಡವೆಂದರೆ ಅಕ್ಕಿಯಲ್ಲಿ ಕಲ್ಲಿದ್ದಂತೆ. ಉರ್ದು, ತೆಲಗು, ಮರಾಠಿಗಳ ನಡುವಿನಿಂದ ಈ ಕಲ್ಲು ಆರಿಸಿ ಹಾಕುತ್ತಿದ್ದಾರೆ. ಕನ್ನಡಕ್ಕೆ ಹೊಸ ಜೀವ, ಹೊಸ ಕಳೆ ಬಾರದೆ ಇದ್ದರೆ ಸಾವು ನಿಶ್ಚಯ. ಇಲ್ಲಿನ ಖಾನೇಸುಮಾರಿ ಅದನ್ನೇ ಹೇಳುತ್ತಿದೆ.

ಜೀವ ಮತ್ತೆ ಬಂದೀತು. ಬರುವದಿನ ಕಾದಿದ್ದೇವೆ. ಬರುವ ಹೊತ್ತಿಗೆ ದೇಹವನ್ನು ಅಣಿ ಮಾಡುವ ಕೆಲಸಕ್ಕೆ ಕೆಲವು ದಿನಗಳಿಂದ ಮೊದಲಾಗಿದೆ. ನಾಡಹಬ್ಬ, ಗಣೇಶಚವತಿಗಳು ನಡೆದಿವೆ. ನಾಟಕಗಳನ್ನು ಕನ್ನಡದಲ್ಲಿ ಆಡುತ್ತಿದ್ದಾರೆ. ವಾಚನಾಲಯಗಳೂ ಸಂಘಗಳೂ ಸ್ಥಾಪಿತವಾಗಿವೆ. ವಾಙ್ಮಯವಿಲ್ಲದುದು ಅಪೂರ್ಣವೆಂದು ಸಾಹಿತ್ಯಕ್ಕೆ ಕೈ ಹಾಕಿದುದಾಯಿತು.ರಾಯಚೂರಿನ ನಮ್ಮ ಬಂಧುಗಳಿಗೆ ಆ ಗೌರವ. ಸದ್ಯದ ಪ್ರಯತ್ನ ಅವರ ಹಾದಿಯ ಮೇಲೇ.

ನಮ್ಮ ಉದ್ದೇಶವಿಷ್ಟೇ. ವರ್ಷಕ್ಕೆ ನಾಲ್ಕು ಪುಸ್ತಕ ಬರೆಸಿ,ಅಚ್ಚು ಹಾಕಿಸುವದು. ಸಾಧ್ಯವಾದ ಮಟ್ಟಿಗೂ ನಿಜಾಂ ಕರ್ನಾಟಕದವರಿಂದಲೇ ಬರೆಸಬೇಕೆಂದು ನಮ್ಮ ಬಯಕೆ. ನಮ್ಮಲ್ಲಿಯ ಬರೆಹಗಾರರು ಸಹಕರಿಸದೆ ನಮ್ಮ ಆಸೆ ಹಣ್ಣಾಗುವದಿಲ್ಲ. ನಮ್ಮಲ್ಲಿನ ಬರೆಹಗಾರರಿಗೆ ನಮ್ಮ ಬಿನ್ನಹ ದಯವಿಟ್ಟು ಪತ್ರವ್ಯವಹಾರ ಮಾಡಿರೆಂದು.

ಇದು ಮಾಲೆಯ ಮೊದಲನೆ ಪುಸ್ತಕ; ಕನ್ನಡದಲ್ಲೂ ಅಷ್ಟೆ. ಈ ಜಾತಿಗೆ ಇದೇ ಮೊದಲು. ಇಂಗ್ಲಿಷಿನಲ್ಲಿ ಇದರ ವ್ಯಾಪಕತೆ ಬಹಳ. ಇದಕ್ಕೆ ವ್ಯಕ್ತಿ ಪರಿಚಯಗಳೆನಬಹುದು. ಇದರಲ್ಲಿ ಒಂಬತ್ತು ಪರಿಚಯಗಳಿವೆ. ಒಂಬತ್ತು ಮಂದಿ ಕನ್ನಡನಾಡಿನ ಹಿರಿಯರು.ಎಲ್ಲ ಹಾದಿಗಳವರೂ ಇದ್ದಾರೆ. ಇವರಲ್ಲದೆ ಇನ್ನೂ ಅನೇಕರಿದ್ದಾರೆ. ಅವರ ಬಗ್ಗೆ ಅನುಕೂಲವಾದಾಗ ಮತ್ತೆ ಬರೆಸುವೆವು. ಇದರಲ್ಲಿನ ಪರಿಚಯಗಳು ಕೆಲವು ಆಗಲೆ

ಕೆಲವುಮಂದಿ ಕನ್ನಡಿಗರಿಗೆ ಪರಿಚಯದವು. ಧಾರವಾಡದ ಜಯಕರ್ನಾಟಕ ದಲ್ಲಿ ಬಂದಿವೆ. ಬರೆದವರೂ ಕನ್ನಡಿಗರಿಗೆ ಪರಿಚಿತರೇ. ಒಬ್ಬರು ಶ್ರೀ 'ಹರಟೆಯಮಲ್ಲ'ರು, ಇನ್ನೊಬ್ಬರು ಶ್ರೀ 'ನಿರೀಕ್ಷಕ'ರು. ಮಾಸ್ತಿ, ಮಂಜೆಪ್ಪ ಹರ್ಡೇಕರ, ಆಲೂರರ ಪರಿಚಯಗಳು ನಿರೀಕ್ಷಕರು ಬರೆದವು, ಉಳಿದವು ಹರಟೆಯಮಲ್ಲರ ಲೇಖನಿಯಿಂದ.

ಅತ್ಯಲ್ಪ ಅವಧಿಯಲ್ಲಿ, ತಮ್ಮ ಎಲ್ಲ ಕೆಲಸಗಳನ್ನೂ ಬದಿಗಿಟ್ಟು- ಸಮಗಾಗಿ ಕೇಳಿದ ಕೂಡಲೆ ಮುನ್ನುಡಿಯನ್ನು ಬರೆದುಕೊಟ್ಟ ಪ್ರೊ. ಗೋಕಾಕರಿಗೆ ನಾವು ಋಣಿಗಳಾಗಿದ್ದೇವೆ.

ನಿಜಾಂ ಕನ್ನಡದಲ್ಲಿ ನಾವು ಮಾಡುತ್ತಿರುವ 'ಅಳಿಲು ಸೇವೆ'ಯ ಕಡೆಗೆ ಕನ್ನಡಿಗರೆಲ್ಲರು ಲಕ್ಷ್ಯ ಕೊಡಬೇಕು. ನೆರವಾಗಬೇಕು. ಇದು ನಮ್ಮ ಬಿನ್ನಹ.

೧೫-೮-೩೪ }

**ಗೆಳೆಯರ ಗುಂಪು,**
**ಹೈದರಾಬಾದ**

# ಮುನ್ನುಡಿ

## (೧)

ಇದೀಗ ಹೈದ್ರಾಬಾದಿನಲ್ಲಿ ಒಂದು ಹೊಸ ಗ್ರಂಥಮಾಲೆಯನ್ನು ಗೆಳೆಯರು ಹೊರಡಿಸಿ ಕನ್ನಡದ ಕಾರ್ಯಕ್ಕೆ ಕಂಕಣಬದ್ಧರಾಗಿದ್ದಾರೆ. ಅಲ್ಲಿಯ ಜನತೆಗಷ್ಟೇ ಅಲ್ಲ; ಕನ್ನಡ ನಾಡಿಗೇ ರಸಭರಿತ ವಾಙ್ಮಯದ ಸೇವೆಯನ್ನು ನೀಡಲಿದ್ದಾರೆ. ಇದರಲ್ಲಿ ನನಗೂ ನನ್ನ ಗೆಳೆಯರಿಗೂ ಅಭಿಮಾನವಿದೆ; ನಿಜಾಂನ ಕರ್ನಾಟಕದ ಜನತೆಗೆ ಸಹಾನುಭೂತಿಯೂ ಸಂತೋಷವೂ ಇದೆ; ಅಖಿಲ ಕನ್ನಡನಾಡಿಗೇ ಸಮಾಧಾನವಿದೆ.

ಈ ಮಾಲೆಯ ಮೊದಲನೆಯ ಗ್ರಂಥವಾದ ವ್ಯಕ್ತಿಪರಿಚಯಗಳ ಸಂಗ್ರಹವೊಂದನ್ನು ನನ್ನ ಲಕ್ಷ್ಯಕ್ಕೆ ತಂದು ಗೆ. ಕೃಷ್ಣಶರ್ಮರು ಒಂದು ಮುನ್ನುಡಿಯನ್ನು ಬರೆಯಬೇಕೆಂದು ಅಪ್ಪಣೆಕೊಟ್ಟರು. ಇಂಥ ಹೊಸ ಮಾದರಿಯ ಗ್ರಂಥಕ್ಕೆ ಮುನ್ನುಡಿ ಬರೆಯುವದು ಒಂದು ಭಾಗ್ಯವೆಂದೇ ನಾನು ತಿಳಿದಿದ್ದೇನೆ. ತೀರಿಹೋದ ಕವಿಗಳ ಇಲ್ಲವೆ ಮಹಾಪುರುಷರ ಜೀವನ ಚರಿತ್ರಗಳು ಕೂಡ ಕನ್ನಡದಲ್ಲಿ ಸುಲಭವಾಗಿ ಸಿಕ್ಕುವದಿಲ್ಲ. ಅಂದಮೇಲೆ ನಮ್ಮವರಾಗಿ, ನಮ್ಮೊಡನೆ, ನಮ್ಮ ನಾಡಿನಲ್ಲಿ ಜೀವಿಸಿದ್ದ ಮಹನೀಯರ ಸ್ವಭಾವಪರಿಚಯಗಳ ಸಂಗ್ರಹವೊಂದರಲ್ಲಿ ಹೊಸಕಳೆಯು ಉಕ್ಕಿ ಬರದೇ ಏನು?

ವ್ಯಕ್ತಿಪರಿಚಯವೆಂಬ ಸಾಹಿತ್ಯವಿಭಾಗವು ಸಂಗ್ರಹರೂಪದಲ್ಲಿ ಕನ್ನಡದಲ್ಲಿ ಕಾಲಿಟ್ಟದ್ದು ಇದೇ ಮೊದಲು. ನನಗೆ ತಿಳಿದಮಟ್ಟಿಗೆ ಮೂರು ಜನ ಸಾಹಿತಿಗಳು ಇದರ ಸುಳಿವು ಹಿಡಿದು ಸಾಗಿದ್ದಾರೆ. 'ನಿರೀಕ್ಷಕ'ರೆಂಬ ನಾಮಾಂಕಿತವನ್ನು ಧರಿಸಿ ಬರೆದ ಶ್ರೀ. ಬೇಂದ್ರೆಯವರು, 'ಕೌಶಿಕ'ರೆಂದುಕೊಂಡ ಶ್ರೀ. ಕಾರಂತರು, ಮತ್ತು 'ಹರಟೆಯಮಲ್ಲ'ರೆಂಬ ಹೆಸರಿನಿಂದ ಪ್ರಸಿದ್ಧರಾದ ಶ್ರೀ. ಕೃಷ್ಣಶರ್ಮರು. ಅನಹ

ಕಾರಣ ಹೇಳಬೇಕು. ಇನ್ನೂ ಶೈಶವಾವಸ್ಥೆಯಲ್ಲಿದ್ದಾಗ ಅಂದಿನ ಕನ್ನಡ
ನಾಡಿನ ಮುಂದಾಳುಗಳ ಸ್ವಭಾವಪರಿಚಯಗಳನ್ನು ಶ್ರೀ. ಬೇಂದ್ರೆಯ
ವರು ಬರೆದು ತಯಾರಿಸಿದರು. ಕೌಜಲಗಿ ಶ್ರೀನಿವಾಸರಾಯರು, ಕಡಪಾ
ರಾಘವೇಂದ್ರರಾಯರು ಮೊದಲಾದ ಮಹನೀಯರ ಹೆಸರುಗಳು
ಆ ಮಾಲಿಕೆಯಲ್ಲಿ ಸೇರಿದ್ದವು. ಆದರೆ ಜಗತ್ತಿನಲ್ಲಿ ಕಾಲಿಡಲು ಹವಣಿಸಿ
ಬೇಂದ್ರೆಯವರನ್ನು ನಂಬಿದ ಅನೇಕ ಕೃತಿಗಳಂತೆ ಈ ಚಿತ್ರಗಳಾದರೂ
ಬಹಳ ದಿವಸ ಬೆಳಕಿಗೆ ಬಾರದೆ ಹೋದವು. ಇನ್ನೂ ಬಂದಿರುವದಿಲ್ಲ.
ನಾಲ್ಕೈದು ವರ್ಷಗಳ ಈಚೆಗೆ ಮಾತ್ರ ಅವರು ಬರೆದ ಕೆಲವು ವ್ಯಕ್ತಿ
ಪರಿಚಯಗಳು (ಮಹಾತ್ಮಾ ಗಾಂಧಿ, ಅರವಿಂದ ಘೋಷರು, ಹರ್ಡೇಕರ
ಮಂಜಪ್ಪನವರು, ಆಲೂರ ವೆಂಕಟರಾಯರು, ಮಾಸ್ತಿ ಶ್ರೀನಿವಾಸರು,
ಮುಂತಾದ ಮಹನೀಯರವು) ಧಾರವಾಡದ ಜಯಕರ್ನಾಟಕದಲ್ಲಿ
ಪ್ರಸಿದ್ಧವಾದವು. ಬೇಂದ್ರೆಯವರ ಕಾವ್ಯಜೀವನದಲ್ಲಿ ಸೌಂದರ್ಯೋ-
ಪಾಸನೆಯಷ್ಟೇ ಅಲ್ಲ. ಸತ್ಯೋಪಾಸನೆಯೂ ಪ್ರಬಲವಾಗಿದೆ. 'ಮಲೆ
ನಾಡಿನ ಗಿಣಿ', 'ಚತುರ್ಮುಖ ಸೌಂದರ್ಯ'ವನ್ನು ಬರೆದ ಕವಿಯೇ
'ತುತ್ತಿನ ಚೀಲ', 'ನರಬಲಿ'ಯನ್ನು ಬರೆದಿದ್ದಾನೆ. ವಿವಿಧ ರಸಗಳನ್ನು
ಪೋಷಿಸಲು ಕವಿಯು ಇವುಗಳನ್ನು ಬರೆಯಲಿಲ್ಲ. ಎರಡು ವಿಧಗಳೂ
ಅನುಭವದಿಂದ ಪುನೀತವಾಗಿ ಬಂದಿವೆ. ಇವರ ಸತ್ಯದ ಹಿಂದೆ ಸೌಂದರ್ಯ
ವಿದೆ; ಸೌಂದರ್ಯದ ಹಿಂದೆ ಸತ್ಯವಿದೆ. 'ಕುಣಿಯೋಣ ಬಾರೆ' ಯಂಥ
ಕವಿತೆಗಳಲ್ಲಿ ಇವೆರಡೂ ಸರಿಬೆರಿಕೆಯಾಗಿವೆ.

ಕವಿಗಿದ್ದ ಈ ಸತ್ಯದ ಹಂಬಲು ಅವರ ವಿಮರ್ಶೆಯ ಪ್ರಾಮಾಣಿ
ಕತೆಯಲ್ಲಿ ಸ್ಪಷ್ಟವಾಗಿದೆ; 'ಉದ್ಧಾರ'ದ ಸಾಮಾಜಿಕ ಪ್ರಶ್ನೆಗೆ
ಕೊಟ್ಟ ಉತ್ತರದ ಸೂಕ್ಷ್ಮ ಬುದ್ಧಿವಂತಿಕೆಯಲ್ಲಿ ಒಡಮೂಡಿದೆ. ಈ
ಸತ್ಯೋಪಾಸನೆಯೇ ಅವರು ಬರೆದ ವ್ಯಕ್ತಿಪರಿಚಯಗಳಲ್ಲಿ ವ್ಯಕ್ತವಾ
ಗಿದೆ. ಇಲ್ಲಿ ಸೌಂದರ್ಯೋಪಾಸನೆಯು ಬರುವದು ಈ ಬರಹಗಳಿಗೆ
ಕಲಾವಂತಿಕೆಯ ಬೆಡಗನ್ನು ಕೊಡಲು; ಪರರ ಅಂತಃಕರಣವನ್ನು ತಿಳಿ
ಯುವ ಸಹೃದಯತೆಯನ್ನು ಒದಗಿಸಲೆಂದು. ಈ ವ್ಯಕ್ತಿಪರಿಚಯಗಳನ್ನು
ಅವರು ಬರೆದುದು ಅಂಥ ಅಂಥ ವೇಳೆಯಲ್ಲಿ, ಸಮಯಾನುಸಾರವಾಗಿ.

ಹೀಗಿದ್ದರೂ ಬರಹದಲ್ಲಿ ಅವರು ಸಮಯಶರಣರಾಗಲಿಲ್ಲ. ಆಲೂರ ವೆಂಕಟರಾಯರು ಅಧ್ಯಕ್ಷರಾದಾಗ ಬೇಂದ್ರೆಯವರು ಅವರ 'ಪರಿಚಯ' ವನ್ನು ಬರೆದರು. 'ಆಚಾರ್ಯ' ತ್ವದ ಗೊಂದಲವೆದ್ದಾಗ ಮಾಸ್ತಿ ಶ್ರೀನಿವಾಸರ ಸ್ವಭಾವ ಚಿತ್ರವನ್ನು ಜನತೆಯ ಕಣ್ಣು ಮುಂದಿಟ್ಟರು. ಹೀಗೆ ಈ ಬರಹಗಳು ಪ್ರಾಸಂಗಿಕವಾದರೂ ಕಾಲಕಾಲಕ್ಕೂ ಅವರು ಮಾಡಿದ ವ್ಯಕ್ತಿವ್ಯಾಸಂಗದಿಂದ ತುಂಬಿಕೊಂಡಿವೆ. ತಮಗೆ ಹೊಳೆದ ವ್ಯಕ್ತಿಜೀವನದ ವಿಮರ್ಶೆಯನ್ನೇ ಅವರು ಪ್ರಾಸಂಗಿಕವಾಗಿ ಹೇಳಿದರು. ಹೇಳುವಾಗ ಅವರು ಉಪಯೋಗಿಸಿದ ಸರಸ ಸಜ್ಜನಿಕೆ, ಕಿರಿದರಲ್ಲಿ ಹಿರಿದನ್ನು ಅಡಗಿಸುವ ನುಡಿ, ಎಲ್ಲ ತೇಜಸ್ವಿಯಾದುವು. ಇಲ್ಲಿರುವ ವಕ್ರಿಮೆ— 'ಕೊಂಕುವೆತ್ತ ಹೊಸ ನುಡಿ', ನೋಡತಕ್ಕಂತಹದು. ಒಂದೇ ವಾಕ್ಯವು ಭಿನ್ನ ಭಿನ್ನ ಭಾವಗಳನ್ನು ಸೂಚಿಸಬಹುದು. ಶ್ರೀ. ಮುಳಿಯ ತಿಮ್ಮಪ್ಪಯ್ಯನವರು ಹೇಳಿದ ಒಂದು ಮಾತು ಇಲ್ಲಿ ನೆನಪಿಗೆ ಬರುತ್ತದೆ. ನೈತು ನುಡಿಯು ಕಿವಿಯನ್ನು ನೇರವಾಗಿ ಸೇರಲಾರದು. ಕರ್ಣಪುಟದ ರಚನೆಯೇ ಕೊಂಕಾಗಿದೆ. ಕರ್ಣರಂಧ್ರಗಳನ್ನು ಸೇರಿ ಎದೆಯನ್ನು ಬಲವಾಗಿ ಮುಟ್ಟುವವಾದರೆ ಕೊಂಕು ನುಡಿಯ ಸೊಬಗೇ ಸರಿ!

'ವ್ಯಕ್ತಿಪರಿಚಯ' ಗಳನ್ನು ಇನ್ನೊಂದು ಕಡೆಗೆ ನಾವು ನೋಡಿದುದು:- **ಸ್ವದೇಶಾಭಿಮಾನಿಯಲ್ಲಿ**— ಶ್ರೀ. ಕಾರಂತರ ಹಸ್ತದಿಂದ. ಕನ್ನಡ ನಾಡಿನ ಅನೇಕ 'ದೀಪಜ್ಯೋತಿ' ಗಳನ್ನು ಕಾರಂತರು ತಮ್ಮ ಲೇಖನ ಮಾಲೆಯಲ್ಲಿ ಚೆನ್ನಾಗಿ ಪರಾಂಬರಿಸಿದರು. ಉಳಿದ ಕೃತಿಗಳಂತೆ ಇವರ 'ಪರಿಚಯ' ಗಳಲ್ಲಿಯೂ ವಿನೋದದಿಂದೊಡಗೂಡಿದ ವಿಡಂಬನೆ ಹೆಚ್ಚು. ಪರಿಚಯ ಕಾರನಿಗೆ ಸಾಮಾನ್ಯವಾಗಿ ಎರಡು ಹಾದಿಗಳಿವೆ. ಅನ್ಯರ ಸ್ವಭಾವ ವೈಶಿಷ್ಟ್ಯವನ್ನು ತಿಳಿದುಕೊಂಡು ಅವರು ಎದುರಿಗಿರಿಸಿಕೊಂಡ ಧ್ಯೇಯದ ಒರೆಗಲ್ಲಿಗೇ ಅವನ್ನು ಹಚ್ಚಬಹುದು. ಇದಕ್ಕೆ ಒಂದು ವಿಧದ ಸಹೃದಯತೆ ಬೇಕು, ಹೆರವರ ಅಂತಃಕರಣವನ್ನು ಒಳಹೊಗುವ ಇಚ್ಛೆ ಬೇಕು. ಇಲ್ಲವೆ ಪರಿಚಯಕಾರನು ತಾನು ಪ್ರೀತಿಸುವ ಮಾನದಂಡದಿಂದ ಅವರ ಗುಣಾವಗುಣಗಳನ್ನು ಅಳೆಯಬಹುದು. ಈ ಹಾದಿ ವಿಡಂಬನಾ ಕಾರನದು, ತಾನು ಕಂಡ ಸತ್ಯದಲ್ಲಿಯೇ ಪರಮ ವಿಶ್ವಾಸವುಳ್ಳವನದು.

ಶ್ರೀ. ಕಾರಂತರ ' ಪರಿಚಯ ' ಗಳಲ್ಲಿ ಈ ಎರಡನೆಯ ಮಾದರಿಯ ಹೊಳಪು ಪುನ: ಪುನ: ಕಾಣಿಸಿಕೊಳ್ಳುವುದು. ಅನೇಕ ಸಲ 'ಪಶ್ಚಿಮದ ವೀರ ' ನಂತೆ ಇವರಾದರೂ ' ಪರಶುರಾಮತೀರ್ಥ ' ಗಳಲ್ಲಿ ತಮ್ಮ ಲೇಖನಿಯನ್ನು ಎದ್ದಿರುವದುಂಟು. ವ್ಯಕ್ತಿಪರಿಚಯ ವಿಭಾಗದ ಮೇಲೆ ಶ್ರೀ. ಕಾರಂತರು ಕೊರಲಗಿನಿಂದ ತಮ್ಮ ಹೆಸರನ್ನೂ ಕೊರೆದಿಟ್ಟಿದ್ದಾರೆ.

ಶ್ರೀ. ಸಿದ್ಧವ್ವನಹಳ್ಳಿ ಕೃಷ್ಣಶರ್ಮರು ನಾವೀಗ ಕಾಣಬೇಕಾದ ಮೂರನೆಯ ವ್ಯಕ್ತಿಪರಿಚಯಕಾರರು. ಇವರು ೧೦ – ೧೨ ವರ್ಷಗಳ ಹಿಂದೆ ಸರ್ವಜ್ಞನ ಕಾವ್ಯವನ್ನು ಕುರಿತು ಬರೆದ ಮೊಟ್ಟ ಮೊದಲಿನ ಲೇಖವು ಇನ್ನೂ ಶ್ರೀ. ಉತ್ತಂಗಿಯವರ ಗ್ರಂಥದ ಪ್ರಸ್ತಾವನೆಯ ಒಂದು ಭಾಗವನ್ನು ಅಲಂಕರಿಸಿದೆ. ಅಲ್ಲದೆ ಮೊದಲನೆಯ ವರ್ಷದ ಜಯಕರ್ನಾಟಕದಲ್ಲಿ ಇವರು ಬರೆದ ಲೇಖಗಳೂ ನಿಬಂಧಗಳೂ ಇನ್ನೂ ಲೋಕಪ್ರಿಯವಾಗುಳಿದಿವೆ. ಇವರ ಹಾಸ್ಯ-ವಿಡಂಬನೆಗಳ ಸಮ್ಮಿಲನವು ಅನುಪಮವಾದುದು. ಆಂಗ್ಲವಾಙ್ಮಯದ ರಸಾನುಭವನ್ನು ಗದ್ಯದಲ್ಲಿ ಉತ್ತರ ಕರ್ನಾಟಕದ ಅನೇಕ ಓದುಗರು ಮೊದಲು ಪಡೆದುದು ಇವರು ಹಾಸ್ಯಪ್ರಬಂಧಗಳಲ್ಲಿ, ಆ ವರ್ಷದ ಜಯಕರ್ನಾಟಕವನ್ನು ತುಂಬಿದ ನೂತನ ಮಾರ್ಗದ ಲೇಖನಗಳಲ್ಲಿ. ಮುಂದೆ ಸುಮಾರು ೧೦ ವರ್ಷಗಳ ವರೆಗೆ ಕೃಷ್ಣಶರ್ಮರು ಬೇರೆ ವಿಧಾನಗಳಲ್ಲಿ ತೊಡಗಿದರು. ಈ ಅವಧಿಯಲ್ಲಿ ಅವರು ಶ್ರೀ. ತಾರಾನಾಥರೊಡನೆ ಕೆಲವು ತಿಂಗಳಿದ್ದರು. ಶ್ರೀ ಟಿ. ರಾಘವಾಚಾರ್ಯರ ದೃಢ ಪರಿಚಯವು ಮೊದಲಿನಿಂದ ಇದ್ದಿತು. ಕಾಲೇಜಿನಲ್ಲಿದ್ದಾಗಲೇ ಶ್ರೀ. ಕೈಲಾಸಂ ಅವರ ಸಹವಾಸ ಲಭಿಸಿತ್ತು. ವಾಙ್ಮಯಮಂದಿರವನ್ನು ಅದೇ ಪ್ರವೇಶಿಸುವಾಗ ಶ್ರೀ. ಬೇಂದ್ರೆಯವರೊಡನೆ ಚಿರ ಸ್ನೇಹದ ಲಾಭವು ದೊರಕಿತ್ತು. ಈ ಹೊಸ ಗುರುತುಗಳೇ ಮುಂದೆ ಅವರ ' ವ್ಯಕ್ತಿಪರಿಚಯ ' ಗಳಿಗೆ ಬೆಂಬಲಾಗಿ ನಿಂತುಕೊಂಡವು. ಅವರು ಇದೇ ಸುಮಾರು ಶ್ರೀ. ಕಾರಂತರೊಡನೆ ಒಂದು ಗೂಡಿ ಕೆಲವು ದಿನಗಳನ್ನು ಕಳೆದರು. ನಾನು ಈ ಮುನ್ನುಡಿಯಲ್ಲಿ ಶ್ರೀ. ಕಾರಂತರ ವಿಷಯವನ್ನು ಹೆಚ್ಚಾಗಿ ಬೆಳೆಸಿಲ್ಲ. ಈ ಸಂಗ್ರಹದಲ್ಲಿ ಅವರ 'ಪರಿಚಯ'ಗಳಿಲ್ಲದ ಮೂಲಕ ನಾನು ಹಾಗೆ ಮಾಡಿರಬಹುದು. ಆದರೆ ನಿಜವಾದ

ಕಾರಣವು ಬೇರೆಯೆಂದು ತೋರುತ್ತದೆ ಕೃಷ್ಣಶರ್ಮರೇ ಶ್ರೀ. ಕಾರಂತರ ಪರಿಚಯವೊಂದನ್ನು ಬರೆಯಬೇಕೆಂದು ನನ್ನ ಮನೀಷೆ !

ಸುಮಾರು ಡಿಸೆಂಬರ ೧೯೩೨ರಲ್ಲಿ ಗೆಳೆಯರು ಹಿಂದಿನಿಂದ ಕೈಕೊಂಡ ಜಯಕರ್ನಾಟಕದಲ್ಲಿ ಕೃಷ್ಣಶರ್ಮರು ಕೆಲಸ ಮಾಡಬೇಕಾಗಿ ಬಂದಿತು ಮುಂದೆ ಒಂದು ವರ್ಷದ ಅವಧಿಯಲ್ಲಿಯೇ ಜಯಕರ್ನಾಟಕದೊಡನೆ ಗೆಳೆಯರ-ಅವರೊಂದಿಗೆ ಕೃಷ್ಣಶರ್ಮರ – ಸಂಬಂಧವು ಪ್ರಸಂಗವಶಾತ್ ಕಡಿದು ಹೋಯಿತು. ಆ ಪ್ರಸಂಗವನ್ನು ಇಲ್ಲಿ ಬಣ್ಣಿಸಬೇಕಾಗಿಲ್ಲ. ಇಷ್ಟರಲ್ಲಿ ಇವರ ಲೇಖನಿಯಿಂದ ಮೇಲೆ ಕಾಣಿಸಿದ ಮಹನೀಯರಲ್ಲಿ ಕೆಲವರ ಪರಿಚಯಗಳು ಹೊರಬಿದ್ದು ಜಯಕರ್ನಾಟಕದಲ್ಲಿ ಅಚ್ಚಾಗಿ ಅದಕ್ಕೆ ಹೊಸ ಕಳೆಯನ್ನು ತಂದಿದ್ದವು. ಈಗ ಇವರು ಹೈದ್ರಾಬಾದಿನಲ್ಲಿ ನೆಲೆಸಿ (ಧಾರವಾಡಕ್ಕೆ ಬರುವ ಪೂರ್ವದಲ್ಲಿಯೂ ಅಲ್ಲಿಯೆ ಇದ್ದರು) ಈ ಗ್ರಂಥಮಾಲೆಯ ಮಾನ್ಯ ಸಂಪಾದಕರಲ್ಲಿ ಒಬ್ಬರಾಗಿದ್ದಾರೆ. ಮೊದಲು ಬರೆದ 'ಪರಿಚಯ'ಗಳನ್ನು ಸಂಗ್ರಹಿಸಿ, ಬೇಂದ್ರೆಯವರ ಕೆಲವು ವ್ಯಕ್ತಿ ಪರಿಚಯಗಳನ್ನು ಆಯ್ದುಕೊಂಡು ಸ್ವತಃ ಬೇಂದ್ರೆಯವರ 'ಪರಿಚಯ' ವೊಂದನ್ನು ಬರೆದು ಈ ಗ್ರಂಥವನ್ನು ಜನತೆಗೆ ಅರ್ಪಿಸಲಿದ್ದಾರೆ.

ಕೃಷ್ಣಶರ್ಮರ ಕಿರುನುಡಿಯ ಮಿಂಚುವೇಗ ಕನ್ನಡಕ್ಕೆ ಹೊಸತು. ಶ್ರೀ. ಪಂಜೇ ಮಂಗೇಶರಾಯರ ನಿದರ್ಶನಕ್ಕೆ ಈ ಪರಿಚಯಗಳನ್ನು ಅವರು ತಂದಾಗ ರಾಯರು ಇದೇ ಮಾತನ್ನು ಹೇಳಿದರು. ಶರ್ಮರ ಶೈಲಿಯಲ್ಲಿ ಒಂದು ತೀವ್ರತೆ, ತೀಕ್ಷ್ಣತೆಯಿದೆ. ಅವರ ಕೊಂಕುನುಡಿಯಲ್ಲಿ ಮೋಹಿಸುವ ಒಂದು ಬಿಗುವು, ಬಿಂಕವಿದೆ. ಕಿರುನುಡಿಗಳ ಮಾಲೆಯನ್ನು 'ಸೆಕ್ಕಿಸಿಕೊಂಡು' ಅವರ ಪರಿಚಯಗಳು ಲೀಲಾಮಾತ್ರವಾಗಿ ಕಠಿನ ಸಮಸ್ಯೆಗಳನ್ನು ಬಿಚ್ಚಿಡುತ್ತವೆ; ನಾಣ್ಣುಡಿಗಳ ಜಾಣ್ಮೆಯನ್ನೂ ತಿಳಿಗನ್ನಡವನ್ನೂ ಮನಸ್ಸಿನೆದರು ಹಾಯಿಸುತ್ತವೆ. ಇದಲ್ಲದೆ ಅವರು ತಮ್ಮ ಲೇಖನಗಳಲ್ಲಿ ಕಾಯ್ದಿಟ್ಟ ತೂಕ, ಕಥಾಕೌಶಲ್ಯ, ವಿಮರ್ಶೆ, ಸೂಕ್ಷ್ಮ ನಿರೂಪಣೆ,—ಎಲ್ಲ ತಲೆದೂಗಿಸುವಂಥವು. ಇಷ್ಟೆಲ್ಲ ಮಾಡಿಯೂ ಜನಸಾಮಾನ್ಯರ ತಿಳಿವನ್ನು ದಾಟಿ ಅವರ ಲೇಖನಿ ಜಾರಿಲ್ಲ. ಪ್ರಚಲಿತ ವಿಷಯಗಳನ್ನು ತೆಗೆದುಕೊಂಡು ಅವುಗಳ ಮೇಲೆ ಉಚ್ಚ ಸಾಹಿತ್ಯದ

ಮುದ್ರೆಯನ್ನು ಕೃಷ್ಣಶರ್ಮರು ಒತ್ತಿದ್ದಾರೆ; ಅಂದರೆ ' ಪರಿಚಯ ಕಾರ ' ನು ಮಾಡಬೇಕಾದ ಕೆಲಸವನ್ನು ಚೆನ್ನಾಗಿ ಮಾಡಿದ್ದಾರೆ.

## (೨)

ಇನ್ನು ವ್ಯಕ್ತಿಪರಿಚಯಗಳ ರೀತಿಯನ್ನು ಕುರಿತು ಒಂದೆರಡು ಮಾತುಗಳನ್ನು ಹೇಳುವದು ಅವಶ್ಯವಾಗಿದೆ. ಮಾನವ ಜಾತಿಯಲ್ಲಿ ಹೆರವರ ಅಂತಃಕರಣವನ್ನು ತಿಳಿದುಕೊಳ್ಳಬೇಕೆಂಬ ಲವಲವಿಕೆ ಮೊದಲಿನಿಂದ ವಾಸಿಸಿದೆ. ಮಾನವರೆಲ್ಲರೂ ಸನ್ಯಾಸಿಗಳಲ್ಲ; ಪರಬ್ರಹ್ಮ ವಸ್ತುವನ್ನು ಚಿಂತಿಸುತ್ತ ಕುಳಿತ ಗುಹಾವಾಸಿಗಳಲ್ಲ. ಸನ್ಯಾಸಿಗಳಿಗೂ ಒಮ್ಮೊಮ್ಮೆ ಸಂಸಾರದ ದಿವ್ಯತೆಯ ಹಂಬಲಿಕೆಯಿರುವದುಂಟು. ಮಾನವನ ಈ ಉತ್ಸುಕತೆಯನ್ನು ಪೂರ್ತಿಗೊಳಿಸುವದಕ್ಕಾಗಿ ಲಾವಣಿ, ಮಹಾಕಾವ್ಯ, ಕಥಾಪ್ರಪಂಚ, ನಾಟ್ಯಕಲೆ,— ಮೊದಲಾದವು ಜನಿಸಿದವು. ಅನ್ಯರ ದುಃಖದಲ್ಲಿ ತನ್ನ ದುಃಖವನ್ನು ಮುಣುಗಿಸಬೇಕು; ಅವರ ಆನಂದದಲ್ಲಿ ತನ್ನ ಹಿಗ್ಗಿನ ನೆಲೆಯನ್ನು ಕಂಡುಕೊಳ್ಳಬೇಕು; ಕಲೋಪಾಸಕನು ಪಡೆದ ಅನುಭವದಿಂದ ತನ್ನ ಪ್ರತೀತಿಯನ್ನು ಪುನೀತವನ್ನಾಗಿ ಮಾಡಬೇಕು: ಇದೇ ಸದಿಚ್ಛೆಯಿಂದ ಮಾನವನು ಕಾವ್ಯ—ನಾಟಕ — ಕಥೆಗಳ ಕಾಲ್ಪನಿಕ ಸಂಸಾರವನ್ನು ಸಹ ಪ್ರಜ್ಞಾಪೂರ್ಣನಾಗಿ ಪರಿಕಿಸುತ್ತಾನೆ.

ಐತಿಹಾಸಿಕ ವ್ಯಾಸಂಗದಿಂದಲೂ ಈ ಪ್ರಜ್ಞೆಯು ಜಾಗೃತವಾಗಬಹುದು. ಕಥಾಪ್ರಪಂಚಕ್ಕಿಂತ ಐತಿಹ್ಯವು ಹೆಚ್ಚು ವಿಸ್ಮಯಕಾರಕವೆಂದು ಒಬ್ಬ ತತ್ತ್ವಜ್ಞನು ಹೇಳಿದ್ದಾನೆ. ಇತಿಹಾಸದಲ್ಲಿಯ ಪಾತ್ರಗಳು ಕೇವಲ ಕವಿಯ ಕಲ್ಪನಾ ಸೃಷ್ಟಿಯಲ್ಲಲ್ಲ, ದೇವರ ಸೃಷ್ಟಿಯಲ್ಲಿಯೂ ಸುಳಿದಾಡಿದವುಗಳು. ಇದರಿಂದ ಅವುಗಳಿಗೆ ಹೆಚ್ಚಿಗೆ ಬೆಲೆ ಬರುವದಂತಲ್ಲ. ಕಾಲ್ಪನಿಕ ಇಲ್ಲವೆ ಐತಿಹಾಸಿಕ ಸಂಗತಿಗಳನ್ನು ಅರ್ಥಪೂರ್ಣವಾಗಿ ಮಾಡುವದು ಕಲಾವಂತರನ್ನೇ ಕೂಡಿದೆ; ರಸಿಕರನ್ನೇ ಕೂಡಿದೆ. ಮೂಲ ಸತ್ಯದ ದೃಷ್ಟಿಯಿಂದ ಲಿಯರ ರಾಜನಿಗೂ ಶಹಾಜಹಾನನಿಗೂ ಯಾವ ಭೇದವಿಲ್ಲ. ಲಿಯರ್ ರಾಜನು ಕಾಲ್ಪನಿಕ ಸೃಷ್ಟಿಯಲ್ಲಿ ಬಾಳಿದನು. ಶಹಾಜಹಾನನು ಈ ಭೂಮಿಯ ಮೇಲೆ ಬದುಕಿ ಬಾಳಿ ಹೋದನು.

ಲಿಯರನು ತನ್ನ ಸೃಷ್ಟಿಯಲ್ಲಿ ಆಡಿದ ಮಾತುಗಳು ಇಂದಿಗೂ ಕಿವಿ ಯಲ್ಲಿ ನಿನದಿಸುತ್ತಿವೆ. ಶಹಾಜಹಾನನು ಕಟ್ಟಿದ ತಾಜಮಹಾಲು ಇಂದಿಗೂ ಮೆರೆಯುತ್ತಿದೆ. ಮಾನವನ ಸ್ಮೃತಿಪಟಲದ ಮೇಲೆ ಇವರೀ ರ್ವರಿಗೂ ಸ್ಥಾನವಿದೆ. ಲಿಯರನ ಜೀವನವನ್ನು ವಿಮರ್ಶಿಸಿ ಓದುಗರು ತಮತಮಗೆ ಹೊಳೆದ ಸತ್ಯವನ್ನು ಕಂಡುಕೊಳ್ಳಬಹುದು. ಶಹಾಜಹಾ ನನ ಜೀವಿತದ ಪರಿಶೀಲನದಿಂದ ನಮಗಾಗುವ ಫಲವು ಇಂಥ ಸತ್ಯದ ಅರಿವಲ್ಲದೆ ಮತ್ತೇನು? ಸತ್ಯವು ವಿಲಾಸಾತಿಶಯದಲ್ಲಿ ವಿವಿಧ ರೂಪಗ ಳನ್ನು ತಳೆದಿದೆ. ಕಾಲ್ಪನಿಕ ಸೃಷ್ಟಿಯ ಸೋಪಾನವನ್ನೇರಿ ವಿಮರ್ಶಕರು ಸತ್ಯಕ್ಕೆ ಕೈಹಾಕುತ್ತಾರೆ. ಇತಿಹಾಸಜ್ಞರು ಐತಿಹ್ಯವನ್ನು ಜಾಳಿಸಿ ನೋಡಿ ಸತ್ಯವನ್ನು ಕಾಣಬಯಸುತ್ತಾರೆ.

ಮೂಲ ಸತ್ಯದ ದೃಷ್ಟಿಯಿಂದ ಐತಿಹ್ಯ ಕಥಾಸೃಷ್ಟಿಗಳು ಅದನ್ನು ತಿಳಿಯುವ ಮಾರ್ಗಗಳು ಮಾತ್ರವಾದರೂ ಇಲ್ಲಿ ಒಂದು ಸಣ್ಣ ಭೇದ ವಿದೆ. ಐತಿಹ್ಯದ ವಿಷಯವಾಗಿ ನಮಗೊಂದು ಕೌಟುಂಬಿಕ ವಾತ್ಸಲ್ಯ ವಿದೆ, ಬಂಧುಪ್ರೀತಿಯಿದೆ. ಎಷ್ಟಾದರೂ ಅದು ತೀರ ನಮ್ಮಂತೆ ಜನಿಸಿ ಬಾಳಿದವರನ್ನು ಸಂಬಂಧಿಸಿದೆ ನೋಡಿ! ಅದರಲ್ಲಿ ಮೂಲ ಸತ್ಯವಷ್ಟೇ ಅಲ್ಲ, ತಾತ್ಕಾಲಿಕವಾದ, ಸಾಂದರ್ಭಿಕವಾದ ಸತ್ಯಾಂಶವು ಬೆರೆತುಕೊಂಡಿದೆ. ನೋಬೆಲ್ ಪಾರಿತೋಷಕವನ್ನು ಪಡೆದವರು ಎಷ್ಟು ಜನರಿಲ್ಲ? ಆದರೂ ನಮಗೆ ಟಾಗೋರರವರಲ್ಲಿ ವಿಶ್ವಾಸ ಹೆಚ್ಚು. ಅವರು ತೀರ ನಮ್ಮವರು! ಯೀಟ್ಸ್, ಗಾಲ್ಸವರ್ದಿ ಮೊದಲಾದವರ ಕೃತಿಗಳನ್ನೋದಿ ನೋಬೆಲ್ ಪಾರಿತೋಷಕವನ್ನು ಪಡೆಯಲು ಬೇಕಾದ ಗೌರವವನ್ನು ತಿಳಿದುಕೊ ಳ್ಳುವದಕ್ಕಿಂತ ಟಾಗೋರರವರ ಗ್ರಂಥಗಳ ದ್ವಾರವಾಗಿ ಅದನ್ನು ಅರಿ ಯಲು ಹೆಚ್ಚು ಉತ್ಸುಕರಾಗುತ್ತೇವೆ. ಸತ್ಯದ ವಿಷಯಕ ಆದಂತೆಯೇ. **ಆಗಿ ಹೋದ** ಸಂಗತಿಗಳಲ್ಲಿ ಅದನ್ನು ಕಂಡು ಹಿಡಿಯುವದು ಕೆಲವರಿಗೆ ಹೆಚ್ಚು ಸೇರಬಹುದು. ಸತ್ಯದ ಮಟ್ಟು ದ್ವಿಗುಣಿತವಾದಂತೆ ಅವರಿಗೆ ಭಾಸವಾಗಬಹುದು. ಇಂಗ್ಲಂಡಿನಲ್ಲಿ, **ಆಗಿ ಹೋದ** ವೃತ್ತಾಂತಗಳ ಕಥೆ ಯನ್ನು ಪ್ರಕಟಿಸುವದಕ್ಕಾಗಿಯೇ ಒಂದು ಮಾಸಿಕವು ಹೊರಡುತ್ತಿದೆ. ಅದೊಂದು ಜನ ಪ್ರಿಯವಾದ ರೀತಿ, ನೋಡಿ.

ಅದರಂತೆ ಜಗತ್ತಿನಲ್ಲಿ ಬಾಳಿ ಹೋದ ಮಹಾಪುರುಷರ ಜೀವನ ಚರಿತ್ರೆಯನ್ನು ಪರಿಶೀಲಿಸುವದೂ ಜನಪ್ರಿಯವಾದ ಮಾತು. ಪ್ರತಿಯೊಂದು ಜೀವನಚರಿತ್ರವೂ ಒಂದೊಂದು ಬಾಯುಬಲ್ಲೆಂದು ಕಾರಲಾಯಲನು ಹೇಳಿದ್ದರ ಅರ್ಥವೇ ಇದು. ಕಲಾಸೃಷ್ಟಿಯು ದೃಶ್ಯಗಳಿಂದ ಜಾಗೃತವಾಗುವ ಪ್ರಜ್ಞೆಯು ಚಾರಿತ್ರ್ಯದಿಂದಲೂ ಕೊನರಬಹುದು. ಚಾರಿತ್ರ್ಯವೆಂದರೆ ದೇವದೇವನು ಬೆಳಗುವ ಸತ್ಯಪ್ರಕಾಶ; ಕಲಾಸೃಷ್ಟಿಯೆಂದರೆ ಈ ಸತ್ಯವನ್ನು ಕಂಡ ಕವಿಯು ಅದನ್ನು ನಿದರ್ಶಿಸುವದಕ್ಕಾಗಿ ನಿರ್ಮಿಸಿದ ಲೋಕ. ಚಾರಿತ್ರ್ಯದ ಮಹಿಮೆಯನ್ನು ಮನದಟ್ಟಾಗಿ ಮಾಡುವದು ಸಹ ಕಲಾಕೋವಿದನನ್ನೇ ಕೂಡಿರಬಹುದು. ಇಷ್ಟೇ ಅಲ್ಲ. ದೇವನ ಸೃಷ್ಟಿಯ ಮೇಲ್ಮೆಯನ್ನು ಸರಿಗಟ್ಟುವದು ಅಶಕ್ಯವೆಂದು ತಿಳಿದು ಕವಿಯು ಇಂಥ ಚಾರಿತ್ರ್ಯವಂತರನ್ನು ತನ್ನ ಲೋಕದಲ್ಲಿಯೇ ಸೇರಿಸಿಕೊಳ್ಳಬಹುದು. ಏಸೂಕ್ರಿಸ್ತ, ಅಶೋಕ, ಅಕಬರ, ವಿದ್ಯಾರಣ್ಯ, ಸೆಂಟ್‌ಜೋನ್ ಮೊದಲಾದವರೇ ಇದಕ್ಕೆ ಉದಾಹರಣೆಗಳಾಗಿದ್ದಾರೆ.

ಕಲೋಪಾಸಕ, ಇತಿಹಾಸಕಾರ, ಚರಿತ್ರಕಾರರು ಒಂದೇ ಮೇಳದವರೆಂದು ಹೇಳಿದ ಹಾಗಾಯಿತು. ಸತ್ಯಶೋಧನೆಯೇ ಅವರನ್ನು ಸಂಗಡಿಸುವ ಒಟ್ಟುಗುರಿ. ಅದನ್ನು ಸಾಧಿಸುವಾಗ ಸಂಭವಿಸುವ ರೀತಿ ವೈವಿಧ್ಯವೇ ಅವರನ್ನು ಕವಲೊಡೆಯುವ ಅವರ ದಾರಿಗಳನ್ನು ಸೂಚಿಸುವ ಕೈಗಂಟು. ಇನ್ನು ಪರಿಚಯಕಾರನ ಸ್ಥಾನವಾವುದು? ಜೀವನ ಚರಿತ್ರಗಳಲ್ಲಿಯೂ ಪರಿಚಯಗಳಲ್ಲಿಯೂ ಕಂಡುಬರುವ ಹೊಳವು ಒಂದೇ. ಕೆಲವು ಮಟ್ಟಿಗೆ ಅಲೌಕಿಕವಾದ ಲೌಕಿಕ ಉದಾಹರಣೆಗಳನ್ನು ಆಯ್ದುಕೊಂಡು ಅವುಗಳ ದ್ವಾರವಾಗಿ ಸತ್ಯದ ಪ್ರಸ್ತಾರವನ್ನೂ ವಿಸ್ತಾರವನ್ನೂ ಪ್ರಸ್ಥಾಪಿಸುವುದು; ಓದುಗರ ಕಲ್ಪನಾಶಕ್ತಿಯನ್ನು ಚೇತನಗೊಳಿಸಿ ಅವರನ್ನು ಸೌಂದರ್ಯದ ಮಾರ್ಗವಾಗಿ ಸತ್ಯಕ್ಕೆ ಒಯ್ದು ಮುಟ್ಟಿಸುವದು. ಆದರೆ ಅವರ ವಿಧಾನಗಳಲ್ಲಿ ತುಸು ಭೇದವಿದೆ. ಪರಿಚಯಕಾರನು **ವಿಶೇಷತಃ** ಜೀವಂತವಿದ್ದ ಮಹನೀಯರನ್ನು ತನ್ನ ವಿಷಯವನ್ನಾಗಿ ಆರಿಸುವನು. ಚರಿತ್ರಕಾರನು **ಸಾಮಾನ್ಯವಾಗಿ** ಇಹಲೋಕಯಾತ್ರೆಯನ್ನು ಮುಗಿಸಿದ ಮಹನೀಯರ ಪದಪದ್ಮಜೀವಿಯಾಗು

ವನು. ಚರಿತ್ರಕಾರನ ಲೇಖಕನಿಗೆ ಸ್ಥಲಸಂಕೋಚವಿಲ್ಲ; ಮಹಾಕಾವ್ಯದ ಕಾದಂಬರಿಯ, ನಾಟಕದ ವಿಸ್ತಾರ ಅವನದು. ಪರಿಚಯಕಾರನು ಕಡ ಲೆಯ ಕಾಳಿನಲ್ಲಿ ಗಣಪತಿಯನ್ನು ಹುದುಗಿಸಬೇಕು, ಕಿಡಿಯಲ್ಲಿ ಇಡಿ ದನ್ನು ಅಡಗಿಸಬೇಕು; ಭಾವಗೀತೆಯ, ಸಣ್ಣ ಕತೆಯ, ಏಕಾಂಕ ನಾಟ ಕದ ಸಂಕೋಚ ಅವನದು. ಚರಿತ್ರಕಾರನಿಗೆ ವರ್ಣನಾತಿಶಯವು ಸಹಜ ವಾಗಿದೆ; ಧ್ವನಿ, 'ಕೊಂಕುವೆತ್ತ ಪೊಸನುಡಿ' ಮಾತ್ರ ಪರಿಚಯಕಾರನ ಜೀವಾಳವಾಗಿದೆ. ಅಗಲವಾದ ಕಾಂಡಪಟದ ಮೇಲೆ ಬಣ್ಣಬಣ್ಣಗಳಿಂದ ಶೃಂಗರಿಸಿ ಚರಿತ್ರಕಾರನು ಒಂದು ಚಿತ್ರವನ್ನು ಬರೆಯುವನು; ಪರಿಚಯ ಕಾರನು ಉಗುರುಗೆಲನದಿಂದ ಬಿಳಿಹಾಳೆಯ ಮೇಲೆ ವ್ಯಕ್ತಿಯ ರೂಪ- ರೇಷಗಳನ್ನು ಮೂಡಿಸುವನು. ಆದರೆ ಉಗುರುಗೆಲನದಲ್ಲಿ ಒಗರಿದ್ದರೆ, ಮಾಡಿದ್ದೇ ಮೂಡು-ಮುಳುಗೆಂಬ ಅಗ್ಗಳಿಕೆಯಿದ್ದರೆ, ಚರಿತ್ರೆಯ ತಿರು ಳೆಲ್ಲ ಇಲ್ಲಿ ಬಂದು ಒಳಸೇರಬಹುದು. ವ್ಯಕ್ತಿಯ ಧ್ಯೇಯ, ದೈನಿಕ ಜೀವನ ಕೊರತೆ, ಹೆಚ್ಚಳ, ಮನಸ್ಸು, ದೇಹ ಎಲ್ಲ ಮೇಳವಿಸಿ ಒಂದು ಸಮಗ್ರ ಚಿತ್ರವಾಗಿ ಮಾರ್ಪಡಬಹುದು. ಈ ಸಂಗ್ರಹದ-ಕೆಲವು ಪರಿಚಯಗಳಲ್ಲಿ ಇಂಥ ಕಲೆಯು ಸಾಧಿಸಿದೆ.

ವಿದೇಶೀಯ ಭಾಷೆಗಳಲ್ಲಿಯೂ 'ವ್ಯಕ್ತಿ ಪರಿಚಯ'ವೆಂಬ ಸಾಹಿತ್ಯ ವಿಭಾಗವು ಹೊಸತೆಂದು ಕಾಣುತ್ತದೆ. 'ಸ್ವಭಾವ ಪರಿಚಯ'ವೆಂಬ ವಿಭಾಗವು ೧೭ ನೆಯ ಶತಮಾನದ ಆದಿಯಲ್ಲಿಯೇ ಆಂಗ್ಲಭಾಷೆಯಲ್ಲಿ ಪ್ರಚುರವಾಗಿತ್ತು. ಅರ್ಲ್, ಒವ್ಹರಬರಿ ಮುಂತಾದವರು ಇಂಥ ಅನೇಕ ಪರಿಚಯಗಳನ್ನು ಬರೆದರು. ಆದರೆ ಇಲ್ಲಿರುವ ಸ್ವಭಾವನಿದರ್ಶನವು ವೈಯಕ್ತಿಕವಲ್ಲ, ಮಾದರಿಯದು. ಕೃಪಣ, ವಿದ್ವಾಂಸ, ನಗರಾಧ್ಯಕ್ಷ, ಹೊಲತಿ, ಗೌಳಿಗರಾಕೆ ಇವೇ ಮೊದಲಾದ ವಿಷಯಗಳನ್ನು ತೆಗೆದು ಕೊಂಡು ಮಾರ್ಮಿಕವಾದ ಶೈಲಿಯಲ್ಲಿ ಆ ಲೇಖಕರು ಸ್ವಭಾವ ಪರಿಚ ಯಗಳನ್ನು ಬರೆಯುತ್ತಿದ್ದರು. ಈ ಪರಿಚಯಗಳು ಹಿಡಿಯುವ ಶ್ರುತಿ ಭದ್ರನಾಟಕಗಳದು: ಜನತೆಯ ಕುಂದು-ಕೊರತೆಗಳನ್ನು ಬೈಲಿಗೆಳೆದು ನಗೆಗೀಡು ಮಾಡುವದು; ಒಮ್ಮೆ ಉದಾಹರಣೆಗಳಿಂದ, ಒಮ್ಮೆ ಸೂಚ್ಯ ವಾಗಿ, ಆದರ್ಶ-ಜೀವಿತವನ್ನು ತಿಳಿಯಪಡಿಸುವದು. ಮಾನವೀಯ

ಸ್ವಭಾವದಲ್ಲಿ ಇರುವ ಪ್ರಕಾರಗಳೂ ಭೇದಗಳೂ ಎಷ್ಟೋ ! ನೀಚತಮ
ರಿಂದ ದೇವತಾ ಪುರುಷರ ವರೆಗೆ ಈ ಪ್ರಕಾರಗಳು ಸಾಲು ಸಾಲಾಗಿ
ನಿಂತಿವೆ. ಅಲ್ಲದೆ ಜನರು ಕೈಕೊಂಡ ಉದ್ಯೋಗ-ಉದ್ಯಮಗಳೇ ಅನೇಕ
ಸಲ ಅವರ ಸ್ವಭಾವವನ್ನು ಬದಲಿಸುವವು. 'ವಕೀಲ'ರೆಂದರೆ ಎಲ್ಲರಿಗೂ
ಸಾಮಾನ್ಯವಾಗಿ ಒಂದು ವಿನೋದಮಯ ಕಲ್ಪನೆಯು ಬಂದೇ ಬರು
ವದು. ಇಂಥ ಔದ್ಯೋಗಿಕ (Professional) ಇಲ್ಲವೆ ಸ್ವಾಭಾವಿಕವಾದ
ಮಾದರಿಗಳನ್ನು ವಸ್ತುವಾಗಿಟ್ಟುಕೊಂಡು ಸ್ವಭಾವ ಪರಿಚಯಕಾರರು
ತಮ್ಮ ಕೆಲಸವನ್ನು ಕೊನೆಗಾಣಿಸುತ್ತಾರೆ. ಕನ್ನಡದಲ್ಲಿ ಪತ್ರಿಕಾ
ಕರ್ತರು ಈ ವಿಭಾಗವನ್ನು ಚೆನ್ನಾಗಿ ಬಳಸಬಹುದು. 'ಮುಂದಾಳು'
'ಅಹಿಂಸಾವ್ರತದ ತರುಣ ತಪಸ್ವಿ', 'ಮತಾಭಿಮಾನಿ' 'ನಗರಾಧ್ಯಕ್ಷ'-
ಇವೇ ಮೊದಲಾದ ಮಾದರಿಗಳನ್ನು ಕುರಿತು ಎಷ್ಟೊಂದು ವಿನೋದ
ಮಯವಾದ, ಹಿತವಾದ, ಮಿತವಾದ ವಿಮರ್ಶೆ ಬೇಕಾಗಿಲ್ಲ ?

ವ್ಯಕ್ತಿಪರಿಚಯದ ಹೊಳಹೂ ಆಂಗ್ಲವಾಙ್ಮಯದಲ್ಲಿ ಅಲ್ಲಲ್ಲಿಗೆ
ಮೊದಲು ಕಂಡು ಬರುತ್ತಿತ್ತು. ಫುಲರನು ಬರೆದ ಶೇಕ್ಸಪಿಯರ್-
ಜಾನ್ಸನ್ನರ ಪರಿಚಯ, ಹೇಯ್ಡನ್ನನು ಬರೆದ ಕೀಟ್ಸ್ ಮುಂತಾದ ಸಾಹಿ
ತಿಗಳ ಪರಿಚಯ, ಹ್ಯಾಜ್ಲಿಟ್ಟನು ತೆಗೆದ ಕೋಲರಿಜ್, ಶೆಲೆ ಮುಂತಾದ
ವರ ಚಿತ್ರಗಳು, ಕಾರಲಾಯಿಲನ ಅನೇಕ ವ್ಯಕ್ತಿಪರಿಚಯಗಳು,-ಇವೆಲ್ಲ
ವುಗಳ ಮೇಲಿಂದ, ಅಸಾಮಾನ್ಯ ವ್ಯಕ್ತಿಗಳನ್ನು ಕುರಿತು ಸ್ವಚ್ಛಂದದಲ್ಲಿಯೇ
ಬರೆಯುವ ಹವಣಿಕೆಯು ಸಾಹಿತಿಗಳ ಹವಣಿಕೆಗಳಲ್ಲಿ ಒಂದೆಂಬುದು
ಸ್ಪಷ್ಟವಾಗುವದು. ಆದರೆ ಆಂಗ್ಲವಾಙ್ಮಯದಲ್ಲಿ ಈ ವಿಭಾಗಕ್ಕೆ
ಮೊದಲು ಪ್ರಾಧಾನ್ಯ- ವೈಶಿಷ್ಟ್ಯಗಳನ್ನು ತಂದುಕೊಟ್ಟವರು 'Alpha
of the Plough' ಎಂದು ಹೆಸರಾದ ಎ. ಜಿ. ಗಾರ್ಡಿನರರು. ಇವರ
Pillars of Society (ಸಮಾಜದ ಆಧಾರಸ್ತಂಭಗಳು), Prophets
Priests And Kings (ಪ್ರವಾದಿಗಳು, ಮಠಾಧಿಪತಿಗಳು ಮತ್ತು
ರಾಜರು), Some People of Importance (ಕೆಲವು ಜನ ಗಣ್ಯಮಹ
ನೀಯರು) ಎಂಬ ಗ್ರಂಥಗಳಲ್ಲಿ ವ್ಯಕ್ತಿಪರಿಚಯವು ತನ್ನ ತುದಿ ಮೊದ
ಲನ್ನು ಕಂಡಿದೆ.

ಇನ್ನೊಂದು ಮಾತು. ವ್ಯಕ್ತಿ ಪರಿಚಯಗಳಲ್ಲಿ ಕಂಡು ಬರುವ ಸತ್ಯವು ಉಳಿದ ಎಲ್ಲ ಸತ್ಯಗಳಂತೆ ಓರ್ವ ವ್ಯಕ್ತಿಯು ಕಂಡುದು, ಆತ್ಮೀಯವಾದುದು. ಪರಿಚಯಕಾರನು ಹೇಳಿದ್ದೇ ವೇದವಾಕ್ಯವೆಂದು ಯಾರೂ ತಿಳಿಯಬೇಕಾಗಿಲ್ಲ, 'ಪರಿಚಯ'ಗಳ ನಾಯಕರಾದ ಮಹನೀಯರೂ ತಿಳಿಯಬೇಕಾಗಿಲ್ಲ. ಲೇಖಕನು ತನ್ನ ಸಮಗ್ರದೃಷ್ಟಿಗೆ ಕಂಡ ಮಾತುಗಳನ್ನು ಹೇಳುತ್ತಾನೆ; ಅವರವರ ಜೀವಿತಗಳಲ್ಲಿ ಅವನಿಗೆ ಹೊಳೆದ ಅರ್ಥವಷ್ಟು. ಉಳಿದವರಿಗೆ ಆ ಜೀವಿತಗಳಲ್ಲಿಯೇ ಬೇರೆಯೊಂದು ಅರ್ಥವು ಹೊಳೆಯಬಹುದು. ಒಂದೊಂದು ಕಣದಲ್ಲಿಯೇ ನೆಲ-ಮುಗಿಲುಗಳ ಸಂಗಮವಾಗುವಾಗ, ಓರ್ವ ವ್ಯಕ್ತಿಯ ಜೀವನವು ಎಷ್ಟು ಗಹನ ವಿಷಯವಾಗಬೇಡ! ಆದರೂ ವ್ಯಕ್ತಿಯು ಕಂಡ ಸತ್ಯದಲ್ಲಿ ಎಲ್ಲರಿಗೂ ಒಪ್ಪಿಗೆಯಾಗುವ ಸತ್ಯದ ಅಂಶವುಂಟು. ಇದರಿಂದ ವ್ಯಕ್ತಿಯು ಹೇಳುವ ಮಾತುಗಳನ್ನು ತಿಳಿಯಲು ಅನುಕೂಲವಾಗುತ್ತದೆ. ದರ್ಶನವು ವ್ಯಕ್ತಿಗತವೆಂಬ ಈ ಭಾವನೆಯಿಂದಾದರೂ ನಮ್ಮಲ್ಲಿ ವ್ಯಕ್ತಿಪರಿಚಯಗಳು ಬೆಳೆದು ಬರಲೆಂಬುದಿಷ್ಟೇ ನನ್ನ ಹಾರೈಕೆ. ವ್ಯಕ್ತಿವಕ್ತಿಗೂ ಸತ್ಯವು ಬಿಡುವದೆಂಬ ಮಾತೇ ನಮ್ಮ ಬಾಳುವೆಯನ್ನು ರಸಮಯವನ್ನಾಗಿ ಮಾಡಿದೆ. ಅದರಲ್ಲಿ ಸಂಶಯವಿಲ್ಲ.

ಇಂಥ ಹೊಸ ಮಾದರಿಯ ಗ್ರಂಥದಿಂದ ಮೊದಲುಗಂಡ ಈ ಗ್ರಂಥಮಾಲೆಯು ಲೋಕಪ್ರಿಯವಾಗಿ ಸಂಪಾದಕರಿಗೂ ಕನ್ನಡ ನುಡಿಗೂ ಶ್ರೇಯಸ್ಕರವಾಗಲೆಂದು ನಾನು ಹಾರೈಸುತ್ತೇನೆ.

ತಾ. ೨೯-೭-೩೪

'ಫರ್ಗ್ಯೂಸನ್'

ಪುಣೆ.

**ವಿ. ಕೃ. ಗೋಕಾಕ**

ಅಭಿನವ ಸಾಹಿತ್ಯಮಾಲಾ

ಹೈದರಾಬಾದ (ದಕ್ಷಿಣ)

ವರ್ಷಕ್ಕೆ ನಾಲ್ಕು ಪುಸ್ತಕ! ಅಂದವಾದ ಮುದ್ರಣ!!

ಲಲಿತ ವಾಙ್ಮಯ!!!

ವರ್ಗಣಿ ರೂ. ೩—೦—೦ (ಅಂಚೆವೆಚ್ಚ ಸೇರಿ)

ವ್ಯವಸ್ಥಾಪಕ

ಅಭಿನವ ಸಾಹಿತ್ಯಮಾಲಾ,

ಗೌಳಿಗೂಡ, ಹೈದರಾಬಾದ

# ತಾರಾನಾಥರಾಯರು

೧೯೧೯ ರಲ್ಲೋ ೨೦ ರಲ್ಲೋ ಮದರಾಸಿನ 'ಹಿಂದೂ' ಪತ್ರಿಕೆ ಯಲ್ಲಿ ಹೈದರಾಬಾದದ ಪ್ರಭುತ್ವದ ಬಗ್ಗೆ ಕೆಲವು ಕಟುವಾದ ಲೇಖಗಳು ಬಂದವು. 'ಬಾಬೆ ಹುಕುಮತ್' ನಲ್ಲಿ–ಹೈದರಾಬಾದ್ ಪ್ರಭುತ್ವದ ಮುಖ್ಯ ಕಾರ್ಯನಿರ್ವಾಹಕ ಮಂಡಲ– ಬಿರುಗಾಳಿ ಎದ್ದಿತು. ಸ್ವಲ್ಪ ದಿನಗಳೊಳಗಾಗಿಯೇ ರಾಯಚೂರಿನ 'ಮದರಸಾ–ಇ–ಹಮ್‌ದರ್ದ್' ಶಾಲೆಯ ಸ್ಥಾಪಕರೂ ಸಂಚಾಲಕರೂ ಆದ ಪಂಡಿತ ತಾರಾನಾಥರು ಹೈದರಾಬಾದದ ದಕ್ಷಿಣ ಗಡಿಯಾದ ತುಂಗಭದ್ರೆಯನ್ನು ದಾಟಿದರು. ತಿರುಗಿ ನಿಜಾಮನ ದೇಶದಲ್ಲಿ ಕಾಲಿಡಲಾರದಂತೆ ದಾಟಿದರು. ಆ ಲೇಖನ ಗಳನ್ನು ಪ್ರತಿಮಾಡಿ ಕಳಿಸಿದ್ದಕ್ಕಾಗಿ ಅವರ ಶಿಷ್ಯನೊಬ್ಬನು ಕೆಲವು ತಿಂಗಳು ಸಶ್ರಮ ಶಿಕ್ಷೆ ಅನುಭವಿಸಿದ.

ಕರ್ನಾಟಕಕ್ಕೆ ಇವರ ಪರಿಚಯ ಅಲ್ಲಿಂದೀಚೆಗೆ. ಕೀ. ಶೇ. ಕಡಪಾ ರಾಯರು ಆ ಪುಣ್ಯ ಕಟ್ಟಿಕೊಂಡರು.

ಸತ್ಯಾಗ್ರಹ, ಸಹಾಯನಿರಾಕರಣಗಳ ಗುಡುಗು ಗುಡುಗುತ್ತಿತ್ತು ಕರ್ನಾಟಕದಲ್ಲಿ ಆಗ. ಹಳ್ಳಿ ಹಳ್ಳಿಯಲ್ಲೂ ವ್ಯಾಖ್ಯಾನಗಳ ಸುರಿಮಳೆ. ಜನ ವೆಲ್ಲ ಮಾತಿನ ಜಾತ್ರೆಯಲ್ಲಿ ನೆರೆದಂತಿತ್ತು. ಮೂಲೆ ಮೂಲೆಯಲ್ಲೂ ಮಾತಿನ ಮಲ್ಲರು ಹುಟ್ಟಿದರು ನಾಯಿಕೊಡೆಗಳಂತೆ; ಮಾತುಗಾರಿಕೆಗೆ ಮುಂದಾಳುತನ ವಶವಾದ ಕಾಲ.

ಎಷ್ಟೋ ಭಾಷಣಗಳನ್ನು ಕೇಳಿದ್ದರು ಜನ. ಕಡಪಾರಾಯರ ಕಳಕಳಿಯ ಭಾಷಣ, ಗಂಗಾಧರರಾಯರ ಗಂಭೀರ ಭಾಷಣ, ಮುದವೇಡಕರರ ಮಾತಿನ ಮಳೆ ಅವರಿಗೆ ಗೊತ್ತು. ಆದರೆ ಈ ಓಘ, ಈ ವಿಚಾರವೈವಿಧ್ಯ, ತರ್ಕ; ಪ್ರಧಾನವಾಗಿ ಈ ಶಕ್ತಿ, ವೇಗ, ಧಾರೆ - ಕನ್ನಡಕ್ಕೆ ಹೊಸದು. ಮಿಂಚಿನಂಥ ಮಾತು, ಕಂಚಿನಂಥ ಕಂಠ, ನಡುನಡುವೆ ಇಂಪಾದ ಗಾಯನ; ಅದೊಂದು ಮೋಹನಾಸ್ತ್ರ. ೧೯೨೨ರಲ್ಲಿ ಹಾನಗಲ್ಲ ಸಭೆಯಲ್ಲಿ ರಾಯರ ಭಾಷಣ ಕೇಳಿದವರು ಬಲ್ಲರು ಅದರ ಅನುಭವ.

ಕರ್ನಾಟಕದ ಮುಂದಾಳುಗಳ ಮಾಲೆಯಲ್ಲಿ ಶ್ರೇಷ್ಠ ಪದವಿ ಇವರದಾಯಿತು. ಕರ್ನಾಟಕದೇವಿಯ ಕೊರಲ ಸರವೆಂದು ಕರೆದರು ಮಂದಿ.

ರಾಯರ ರೂಪವು ಆಕರ್ಷಕ, ಮೋಹಕ. ಗ್ರೀಕರ ಪುತ್ತಳಿಗಳಂತೆ ಎತ್ತರವಾದ, ತೆಳುವಾದ, ಮಾಟದ ನಿಲುವು. ಸ್ವಲ್ಪವೂ ಕೊಳೆಯಿಲ್ಲದೆ ಸ್ವಚ್ಛವಾದ ಬಿಳಿಯ ಉಡುಪು. ಉಂಗುರ ಉಂಗುರಗಳಾಗಿ ಸುತ್ತಿಕೊಂಡು ಕಿರೀಟದಂತೆ ತಲೆಯ ಸುತ್ತಲೂ ನಿಂತಿರುವ ಕಪ್ಪುಕೂದಲಿನ ಕ್ರಾಪು. ಅದಕ್ಕೆ ಸರಿಯಾಗಿ ಗೌರವರ್ಣದ ದುಂಡು ಮೋರೆ. ಮೋರೆಯ ಮೇಲೆ ಅದ್ಭುತವಾದ ರಾಜವರ್ಚಸ್ಸು. ಕಣ್ಣು ತಿಳಿಯಾಗಿ ಹೊಳೆವ ದಾರ್ಶನಿಕನ ಗಂಭೀರವಾದ ಜಾತಿ. ಆ ಕಣ್ಣಿನ ಹಿಂದೆ ಅಗಾಧವಾದ ಗೂಢವಾದ ಏನೋ ಒಂದು ಇರಬೇಕೆಂಬುದರ ಸೂಚನೆಯ ಕಳೆ ದೃಷ್ಟಿಯಲ್ಲಿ. ಶುದ್ಧ ಬಿಳೀಬಣ್ಣದ ಸಮಕಟ್ಟಾದ ಹಲ್ಲಿನ ಸಾಲು. ಆ ಮೋರೆಗೆ ಒಪ್ಪುವಂಥ ನೀಳವಾದ ಮೂಗು. ಹುಟ್ಟೇ ಜನಜಂಗುಳಿಯಿಂದ ಬೇರೆಯಾದದ್ದು. ನೋಡಿದರೆ ಹುಚ್ಚು ಹಿಡಿಸುವಂಥದು; ಮೋಹಿನೀಮಂತ್ರ.

ಸಂಭಾಷಣೆಯಲ್ಲಿ ರಾಯರ ಚಾತುರ್ಯ ರಾಯರದೇ. ಬೇರೆಯಾರಿಗೂ ಸಾಧ್ಯವಿಲ್ಲ. ರಂಗಭೂಮಿಯನ್ನು ರಂಗಿಗೇರಿಸುವ ಗಂಭೀರ ಧ್ವನಿ; ಸ್ಪಷ್ಟವಾದ ಶಕ್ತಿಯುತವಾದ ಶಬ್ದೋಚ್ಚಾರ; ಕೇಳಿದ ಪ್ರಶ್ನೆಗೆ ಸಿದ್ಧವಾದ ಉತ್ತರ. ಅವರೊಡನೆ ಒಂದು ತಾಸು ಮಾತನಾಡುವದೆಂದರೆ ಒಂದು ಹಬ್ಬದೂಟವಿದ್ದ ಹಾಗೆ. ವನಸ್ಪತಿಶಾಸ್ತ್ರದಿಂದ ವೇದಾಂತದ ವರೆಗೆ, ವಿನೋದದಿಂದ ವಿಜ್ಞಾನದ ವರೆಗೆ, ಸಾಹಿತ್ಯದಿಂದ ಸಂತಾನನಿರೋಧದ ವರೆಗೆ, ಸಚ್ಚಿದಾನಂದದಿಂದ ಸಮಾಜಸುಧಾರಣೆಯ ವರೆಗೆ,

ರಾಜಕಾರಣದಿಂದ ರಂಗಭೂಮಿಯ ವರೆಗೆ, ಯೋಗದಿಂದ ರಾಗದವರೆಗೆ– ಮಿಂಚಿನಂತೆ ಆ ಸಂಭಾಷಣದ ಸುತ್ತಾಟ. ನಡುನಡುವೆ ಒಂದೆರಡು ಹಾಡೂ ಬರಬಹುದು. ಸ್ವಾನುಭವದ ಸೆಲೆಯಿಂದ ನೇರಾಗಿ ಬಂದ ಮಾತು ಅವು; ಪುಸ್ತಕ ಪಾಂಡಿತ್ಯವಲ್ಲ. 'ಪ್ರೇಮಾಯತನ' ಆಶ್ರಮದಲ್ಲಿ ಪುಸ್ತಕ ಭಂಡಾರವೇನು ಸಣ್ಣದಲ್ಲ. ಆದರೆ ಪುಸ್ತಕಗಳು ಅನುಭವದ ಪ್ರಮಾಣಕ್ಕಾಗಿ ಮಾತ್ರ. ಅವರ ಮಾತು ಅವರವೇ ಸರಿ. ಎಲ್ಲಾ ಅನುಭವದ ಭಾಷೆ, ಆತ್ಮ ಕಥೆ.

ಮಾತಿನಲ್ಲಿ ಅಲಂಕಾರ ಬಹಳ. ಶ್ಲೇಷ ಬೇಕಾದ ಹಾಗೆ. 'ಸದಾಚರಣನಿಷ್ಠ' ಎಂಬುದು ಚತುರ್ವರ್ಣದ ಪ್ರಸಂಗದಲ್ಲಿ ಎಲ್ಲೋ ಬಂದ ಶಬ್ದ. ಅದರ ವ್ಯಾಖ್ಯಾನ—ರಾಯರು ಮಾಡಿದ್ದು—ನನಗೆ ನೆನಪಿದೆ. ಸತ್ ಆಚರಣನಿಷ್ಠಃ ಬ್ರಾಹ್ಮಣ, ಸದಾ ಚರಣನಿಷ್ಠಃ ಕ್ಷತ್ರಿಯ. ಸದಾ ಚರಣನಿಷ್ಠಃ ವ್ಯಾಪಾರಿ,ವೈಶ್ಯ. ಸದಾಚರಣನಿಷ್ಠಃ ಸೇವಾನಿರತ, ಶೂದ್ರ. 'ಕಲಿಯುಗವೆಂದರೆ ಕಲಹಯುಗ' Struggle for existance 'ಕಲಾಯುಗ' – The age of popular art 'Art ಅಂದರೆ "Thou art" ಎಂಬುದರ ಹಾದಿ.' ಶಬ್ದಗಳ ಉಪಯೋಗದಲ್ಲಿ ರಾಯರದು ಬೆರಗಾಗಿಸುವಂಥ ಬೆಡಗು; ಯಕ್ಷಿಣೀ ವಿದ್ಯೆ. ವಾದದಲ್ಲಿ ಬಿರುಗಾಳಿ. ಸೋಲೆಂಬುದನ್ನು ಅರಿಯರು. ಆ ಮಾತಿನ ಮಲಕು, ತರ್ಕದ ಚಕ್ರದಲ್ಲಿ ಸೋಲಿನ ಸೊಂಕೇ ಇಲ್ಲ.

ಅವರ ವಿದ್ವತ್ತೂ ಅಸಾಧಾರಣವಾದುದು. ಅದು ಮುಟ್ಟದ ಸೊಪ್ಪಿಲ್ಲ; ಅವರು ಅರಿಯದ ವಿದ್ಯೆಯಿಲ್ಲ. ಅವರ ವೈದ್ಯಶಾಸ್ತ್ರದ ಪಾಂಡಿತ್ಯ ಜಗತ್ತಿಗೇ ಗೊತ್ತಿದೆ. ಇಂಗ್ಲಿಷು, ಯುನಾನಿ, ಆಯುರ್ವೇದ ಇತರ-ಎಲ್ಲಾ ರೀತಿಗಳಲ್ಲೂ ಅವರಿಗೆ ಪ್ರವೇಶವಿದೆ. ಜತೆಗೆ ಯೋಗದ, ಮಂತ್ರದ ಬೆಂಬಲ. ವೇದಾಂತವಂತೂ ಅವರದೇ ರಾಜ್ಯ. ವಿವೇಕಾನಂದ ರಾಮಕೃಷ್ಣರ ಪಂಥ ಬಹಳ ದಿನ ಅವರದಾಗಿತ್ತು. ಅಂಗಸಾಧನೆ, ರಂಗತಾಲೀಮು; ಗಾಯನ, ವಾದನ; ಕಲೆ, ಕಾವ್ಯ; ಯೋಗ, ತಂತ್ರ;- ಅದು ಇದು ಎನ್ನುವ ಹಾಗಿಲ್ಲ. ಎಲ್ಲಾದರಲ್ಲೂ ರಾಯರಿಗೆ ಒಳ್ಳೇ ಹಿಡಿತ. ಅವರ ಭಾಷಾಪ್ರಭುತ್ವವೂ ಹಾಗೇ. ಇಂಗ್ಲಿಷು ಕನ್ನಡಗಳ

ಮೇಲಿನ ಅವರ ಹಿಡಿತ ಕರ್ನಾಟಕವು ಕಂಡ ಮಾತು. ಉರ್ದು ಹಿಂದೀಗಳಲ್ಲೂ ರಾಯರಿಗೆ ಅಷ್ಟೇ ಪಾಂಡಿತ್ಯ. ಅರಬ್ಬೀ, ಫಾರ್ಸೀ, ಮರಾಠೀ, ತೆಲುಗು, ತಮಿಳುಗಳೂ ಚೆನ್ನಾಗಿ ಬರುತ್ತವೆ.

ಸೂತ್ರಗಳು—' ಕಿಡಿನುಡಿ ' ಗಳು ಬಹಳ ಅವರ ಮಾತಿನಲ್ಲಿ— ಅವರ ಸೂತ್ರಗಳೂ ಸಿದ್ಧಾಂತಗಳೂ ನಕ್ಷತ್ರಕನಂತೆ, ಸಾಲಕೊಟ್ಟ ಮಾರವಾಡಿಯಂತೆ, ಸದಾಸಿದ್ಧ. ಏನು ಮಾಡಿದರೂ ಹೋಗುವದಿಲ್ಲ. ಅವರ ವಿಚಾರ ಸರಣಿಯೂ ಅಂಥದೇ. ' ಜೀವವದು ಪ್ರೇಮ, ಪ್ರೇಮವದು ಜೀವ '-' ಖಂಡಾನಂದದ ಪದೇ ಪದೇ ತ್ಯಾಗವೇ ಅಖಂಡಾನಂದ '— ' ಅಜ್ಞಾನದ ಗ್ರಂಥಿಯನ್ನು ಬಿಚ್ಚುವದೇ ಗ್ರಂಥ' ಇಂಥ ವಾಕ್ಯಗಳನ್ನು ಮರೆತಾದರೂ ಸಾದಾ ಅಕ್ಷರದಲ್ಲಿ ಅಚ್ಚು ಹಾಕಿಸುವದಿಲ್ಲ. ಅವು ಜನರ ಕಣ್ಣಿಗೆ ಎದ್ದು ಕಾಣುವ ಹಾಗೆ ಅಚ್ಚಾಗಬೇಕು. ಅಂದರೆ ಅದರ ಪರಿಣಾಮವಾದೀತು. ಈಗಂತೂ ನಮ್ಮಲ್ಲಿ ದಪ್ಪಕ್ಷರದ ಪಂಥವೇ ಒಂದು ಮೊದಲಾಗಿದೆ. ಅದೊಂದು ವಿಲಕ್ಷಣತೆ ಅವರದು. ಪ್ರಧಾನವಾದ ವಿಲಕ್ಷಣತೆ. ಜನಜಂಗುಳಿಯೆಂದರೆ ಜಾಣತನವಿಲ್ಲದ ದಡ್ಡ ನಾಯಿಯಂತೆ. ಯಜಮಾನನಂತೆ ಮುಂದೆ ನಿಂತು ಸಿಳ್ಳು ಹೊಡೆದರಾಯ್ತು. ಬಾಲ ಅಲ್ಲಾಡಿಸುತ್ತ ಸುಮ್ಮನೆ ಹಿಂದೆ ಬಂದೇ ಬಿಡುತ್ತವೆ. ಇದು ರಾಯರಿಗೆ ಪೂರಾ ಗೊತ್ತು. ಅಂತೇ ಆ ವಿಲಕ್ಷಣತೆ, ಆ ಅಧಿಕಾರವಾಣಿ, ದರ್ಪ !

ಮಾತಿನ ಮುಲಕಿನಲ್ಲಿ ಸತ್ಯಕ್ಕೆ ಉರುಲು ಹಾಕುವ ಜಾತಿ-ಯೆಂದು ಗೆಳೆಯನೊಬ್ಬನ ಬಗ್ಗೆ ಮಾತುಬಂದಿತ್ತು. ಆ ಮಾತು ಒಮ್ಮೊಮ್ಮೆ ರಾಯರಿಗೆ ತಳಕು ಹಾಕಲೂ ಬಹುದು. ಆದರೆ ಅವರ ಸದಾಸಿದ್ಧ ಉತ್ತರಕ್ಕೆ ಕಟ್ಟಿದ ಬಾಯಿಲ್ಲ. ಒಮ್ಮೆ ಹೀಗೊಂದು ಪ್ರಶ್ನೆ ಬಂತು. " ರಾಯರೆ, ತಮ್ಮಂಥ ಸಾಧುಗಳ ಸುತ್ತ ಈ ನೀತಿಲಂಡರ, ಲಫಂಗರ ಗುಂಪೇಕೆ ? ಸಂತರನ್ನು ಸೆಳೆಯಬಾರದೆ ? " ಒಳ್ಳೇ ಪೇಚಿನ ಪ್ರಶ್ನೆ. ಮುಗಿಯುವ ಮೊದಲೇ ಬಂತು ಉತ್ತರ. " ಲಫಂಗರಿಗಲ್ಲದಿದ್ದರೆ ಸಾಧುಗಳ ಸಹವಾಸದ ಪ್ರಯೋಜನ ಸಂತರಿಗೇಕೆ? ಪಾಪಿಗಳ ಪರಾವರ್ತನಕ್ಕಾಗಿ ಅಲ್ಲದಿದ್ದರೆ ಸಾಧು ಇರಬೇಕಾದರೂ ಏಕೆ ? " ಪರಾವರ್ತನ

ವನ್ನು ಪ್ರಮಾಣಕ್ಕೆ ಹಚ್ಚುವಷ್ಟು ಪ್ರಯತ್ನದ ನೆನಪೂ ಆಗುವದಿಲ್ಲ ಆ ವಿದ್ಯುದ್ವೇಗದಲ್ಲಿ. ಯಾರಿಗಾದರೂ ಆದರೆ– 'ಪಾಪ ಪಾತಿತ್ಯಗಳಿಗೆ ಅಸ್ತಿತ್ವವಿಲ್ಲ. ಬರೀ ಮಾನಸಸಂಕೇತ. ಇರುವದೆಲ್ಲಾ ಅಜ್ಞಾನ, ಅಜ್ಞಾನ!' ತಮ್ಮ ಮಂಡಲಿಯ 'ಅಜ್ಞಾನ', ಆಸಿಗ್ರಹಗಳಿಗೆ ಅವರು ತೋರುವ ತಾಳ್ಮೆ, ಸಹನೆ ಅಸದೃಶ.

ರಾಯರ ಅಭಿಪ್ರಾಯಗಳು ನಿಮಗೆ ಅಸಮ್ಮತ, ಅಸಹನೀಯವಿರ ಬಹುದು. ಟೀಕೆ ಅತಿ ಕಟು, ಅಮಾನ್ಯ ಅಕಾರಣವಿರಬಹುದು. ಅವರ ಮತವೂ ಪಥವೂ ನಿಮ್ಮ ಮತ ಪಥಗಳಿಗೆ ಬೆಂಕಿ–ನೀರಿದ್ದ ಹಾಗೆ.ಅವರ ಆದರ್ಶದ ಎಳೆ ಸಿಗಲಿಕ್ಕಿಲ್ಲ; ಆದರ್ಶ ಸಮಾಜದ ಕಲ್ಪನೆ ಅರ್ಥವಾಗಲಿಲ್ಲ, ಕೆಲವು ಕೃತಿಗಳು ಸೇರಲಿಕ್ಕಿಲ್ಲ. ಆದರೂ, ಅವರ ಅಭಿಪ್ರಾಯ ಲಕ್ಷ್ಯ ಗೊಟ್ಟು ಕೇಳದವರು ಕಡಿಮೆ. ಟೀಕೆಯನ್ನು ಅಲ್ಲಗಳೆದವರು ಇಲ್ಲ.ಅವರ ಮತದ ಮುದ್ರೆಗೆ ಮುಂದರಿದವರೂ ಆದರ್ಶಸಮಾಜದಲ್ಲಿ ಹೆಸರು ಹಚ್ಚಲು ಹೋದವರೂ ಲೆಕ್ಕಕ್ಕೇ ಸಿಗುವದಿಲ್ಲ. ಅವರಿಗಿಂತ ಹೆಚ್ಚಿನ ಪಂಡಿತರು, ವೇದಾಂತಿಗಳು, ಯೋಗಿಗಳು ಇದ್ದಾರು; ವಕ್ತೃಗಳೂ ವೈದ್ಯರೂ ಸಿಕ್ಕಾರು, ಬೇಕಾದವರಿರಬಹುದು. ಆದರೆ ಈ ಅಪೂರ್ವ ನೋಳ ನದ ಇಂದ್ರಜಾಲ ಮಾತ್ರ ಯಾರಲ್ಲಿಯೂ ಇಲ್ಲ. ಇದೇ ಅವರ ಜೀವಾಳ.

ಮಾತುಗಾರಿಕೆಯ ಗೆಲುವು, ವಕ್ತೃತ್ವದ ವಿಜಯ ಅದು. ಅದ್ವಿ ತೀಯ ವಿಜಯ.

* * * *

ಕಾರ್ಯರಂಗದಲ್ಲಿ ಅವರಿಗೆ ಅಭಿಮಾನವಿಲ್ಲ. 'ನಿಜವಾಗಿ ನನ್ನದು ಜ್ಞಾನಯೋಗ; ಕರ್ಮಯೋಗವಲ್ಲ–'' ಎಂದು ಅವರೇ ಹೇಳಿದ್ದಾರೆ ಹತ್ತಾರು ಸಲ. ಆದರೆ ಕರ್ಮದ ಉಪಾಧಿ ಯಾರಿಗೂ ತಪ್ಪಿದ್ದಲ್ಲ. ಉಪಾಧಿಯನ್ನೇ ಲೀಲೆಯಾಗಿ ಮಾಡಿಕೊಂಡರಾಯಿತು, ಬಂಧನವಿರುವ ದಿಲ್ಲ. 'ಪ್ರೇಮಾಯತನ' ಆಶ್ರಮವೂ ಅಂಥದೊಂದು ಲೀಲೆ. ಆಧುನಿಕ ಶಿಕ್ಷಣವು ಆತ್ಮರಹಿತವಾದ ಕುಕ್ಷಿಂಭರಣ ವಿದ್ಯೆ. ವಿದ್ಯೆಯ ಗುರಿ 'ಅವಿದ್ಯೆ' ಯನ್ನು ಕಳೆಯುವದು. ಹೀಗೆಯೇ ಪ್ರೇಮಾಯತನ ಮೊದ ಲಾದದ್ದು. ಯೋಗ ಶಿಕ್ಷಣದ ಪ್ರಸಾರದ ಗೊಂದಲ ಕೆಲದಿನವಿತ್ತು.

ಆಯುರ್ವೇದದ ಆದರ್ಶಶಾಲೆಗೆ ತಳಗಲ್ಲು ಹಾಕಿ ಹತ್ತು ವರ್ಷವಾಯಿತು. 'ಪ್ರೇಮ ವಿದ್ಯಾಪೀಠ' ದ ಹೆಸರು ಪತ್ರಿಕೆಗಳಲ್ಲಿ ಈಗೀಗ ಬರುತ್ತಿದೆ – ಜಾಹೀರಾತಿನ ಪುಟಗಳಲ್ಲಿ. ಪತ್ರಿಕಾನಿರ್ವಹಣದಲ್ಲಿ ಕೆಲವು ದಿನ ಪ್ರವೃತ್ತರಾಗಿದ್ದರು. ರಾಜಕೀಯರಂಗದ ರುಚಿ ನೋಡಿದರು. ಸ್ತ್ರೀ ಸ್ವಾತಂತ್ರ್ಯದ ಬಗ್ಗೆ ಸದಾ ವಾದಿಸಿದರು.

ಸಮಾಜದ ಬಗ್ಗೆ, ಸ್ವಾತಂತ್ರ್ಯದ ಬಗ್ಗೆ, ಸುಧಾರಣೆ ಶಿಕ್ಷಣಗಳ ಬಗ್ಗೆ ಎಷ್ಟೋ ಸವಿಗನಸುಗಳು, ಆಶೆಗಳು ಅವರವು. ಆದರೆ ಎಲ್ಲಾ ಕಾಲಿಲ್ಲದ ಕಲ್ಪನೆ, ಜೀವವಿಲ್ಲದ ಭಾವ. ಕಲ್ಪನೆಯ ಕುದುರೆಗೆ ಕಾರ್ಯದ ಕಡಿವಾಣ ಹಾಕುವ ಕಲೆಯೊಂದು–ಅದೊಂದೆ – ರಾಯರಿಗೆ ದಕ್ಕಲಿಲ್ಲ. ಕನ್ನಡಿಗರ ದುರದೃಷ್ಟ!

* * * *

ರಾಯರ ಈಗಿನ ದೇಹವನ್ನು ನೋಡಿದವರಿಗೆ ಆಟಗಾರರಾಗಿದ್ದರೆಂಬ ಸಂಶಯವೇ ಬರುವದಿಲ್ಲ. ಅಷ್ಟು ಬೆಳೆದಿದೆ ಮೈ. ವಿದ್ಯಾರ್ಥಿಯಾಗಿದ್ದಾಗ ಅವರಿಗೆ ಕ್ರಿಕೆಟ್, ಟೆನ್ನಿಸು ಆಟಗಳಲ್ಲಿ ತುಂಬಾ ಆಸೆ. ಈಸುವದರಲ್ಲಿ ಬಹಳ ಪ್ರೀತಿ. ದಿನವೂ 'ಹುಸೇನ್ ಸಾಗರ' ಕ್ಕೆ ಮೂರು ಮೈಲು ಹೋಗುತ್ತಿದ್ದರಂತೆ ಮುಂಜಾನೆ. ಧೈರ್ಯ, ಸಾಹಸ, ನಿರ್ಭಯಗಳು ಅವರ ಪ್ರಧಾನ ಗುಣಗಳು. 'ಹಾಥೀ ಚಲೇ ಬಾಜಾರಮೇ ಕುತ್ತೇ ಭುಂಕೇ ಸವ್ವೆಯಾಲಾಖ್' ಎಂಬ ಶಾಂತ ಸ್ವಭಾವ. ನೋಡುವದಕ್ಕೆ ಕಾಣಬರದಿದ್ದರೂ ರಾಯರ ಮೈಕಟ್ಟು ಬಲವಾದುದು. ದೇಹಬಲವೂ ಸಾಧಾರಣವಲ್ಲ. ಯೋಗಬಲದ ಕತೆಗಳು ಬೇಕಾದಷ್ಟು! ಚಂದ್ರನ ಬಣ್ಣವನ್ನೊಮ್ಮೆ ಬದಲಿಸಿದ್ದರಂತೆ. ವೈಜ್ಞಾನಿಕರ ಮುಂದೆ ತಮ್ಮ ನಾಡಿ ನಿಲ್ಲಿಸಿ ತೋರಿಸುವದು ಅವರ ಮೊದಮೊದಲಿನ ಚಟ. ಇನ್ನೂ ಎಷ್ಟೋ! ಈಚೆಗೆ, ಶಕ್ತಿಯನ್ನು ಸಂಯಮನ ಮಾಡುವ ಶಕ್ತಿಯೇ ಶ್ರೇಷ್ಠವೆಂದು ಅವರ ಅಭಿಪ್ರಾಯ.

ಸಂಗೀತದಲ್ಲಿ ರಾಯರಿಗೆ ಪ್ರೀತಿ. ಹೋದ ಹೋದಲ್ಲೆಲ್ಲ ಭಜನೆಯದೊಂದು ಹುಚ್ಚನ್ನೆಬ್ಬಿಸಿ ಬಿಡುತ್ತಾರೆ. ಅವರ ಕೆಲವು ಕವನಗಳು– ಹಿಂದೀ ಹಾಡುಗಳು – ಇಂಪಾಗಿವೆ. ಸಾಹಿತ್ಯದ ಸರಸತೆಯೂ ಅಲ್ಲಿದೆ.

ಇತ್ತೀಚಿನ ಕವನಗಳಲ್ಲಿ ಮೊದಲಿನ ಮಧುರ ಭಾವವಿಲ್ಲ, ರಸವಿಲ್ಲ. ವೇದಾಂತದ ಬಿರುಸು, ಸೋಹಂ-ದ ಸೆಟೆತ ಬಹಳ.

ರಾಯರು ಬಹಳ ದಿನ ನಿಷ್ಠುರ ಬ್ರಹ್ಮಚಾರಿಗಳಾಗಿದ್ದರು. ಹೆಣ್ಣೆಂದರೆ ಹೊಲತಿ, ಹೇಸಿಗೆ ಆಗಿದ್ದಳು ಇವರ ಪಾಲಿಗೆ. ಬೀದರದಲ್ಲಿ ಮಾಸ್ತರರಿದ್ದಾಗ ಈ ಕಾಠಿಣ್ಯ, ಕಠತೆ ಬಹಳ. ಅಲ್ಲಿ, ಬೈರಾಗಿ ಗೋಸಾಯಿಗಳ ಗುಂಪು ಹೆಚ್ಚು. ರಾಯರಿಗೆ ಹಗಲು ಶಾಲೆ, ರಾತ್ರಿ ಬೈರಾಗಿಗಳು. ಹೀಗಾಗಿ ಹೆಣ್ಣಿಗೆ ಜಾಗವೇ ಇರಲಿಲ್ಲ. ಅವರ ತಾಯಿ ಕೂಡ ಅವರ ಅರಿವೆ ಅಂಚಡಿಗಳನ್ನು ಮುಟ್ಟುತ್ತಿರಲಿಲ್ಲ. ಅಲ್ಲಿಯ ನರಸಿಂಹಝರಣಿಯಲ್ಲಿ ಸ್ನಾನಮಾಡಿ ವಿಭೂತಿ ಧರಿಸಿ ಹೊರಟರೆ ಭೈರವನ ಅವತಾರದಂತೆ ಅನಿಸುತ್ತಿತ್ತಂತೆ.

ಆಗಲೇ ರಾಯರ ಪ್ರಗತಿಗೆ ನಾಗಾಲೋಟ.

ಮುಂದೆ ರಾಯಚೂರಿನಲ್ಲಿ ಮಾಸ್ತರರಾದರು. ಆಗ ಅವರ ದೃಷ್ಟಿ ಸಮಾಜಸೇವೆಯ ಕಡೆಗೆ ಹೊರಳಿತು. ರಾಯಚೂರಿನ ಮದರಸಾ-ಇ-ಹಮ್‌ದರ್ದ್ ಎಂಬ ಸ್ವತಂತ್ರ ಶಾಲೆ ಅದರ ಫಲ. ಸರಕಾರೀ ನೌಕರಿ ಬಿಟ್ಟು ಇದನ್ನು ಹೂಡಿದರು. ವೇಷದ; ಉಡುಪಿನ ಅಲಂಕಾರ ಹೋಯಿತು. ಖಾದೀ ತೊಟ್ಟರು. ಊರಿಗೆ ಒಮ್ಮೆ ಪ್ಲೇಗು ಬಡೆದು ಜನ ನೊಣಗಳಂತೆ ಸಾಯಹತ್ತಿದರು. ರಾಯರ ಖಿಲಬತ್ತಿಗೆ ರಾತ್ರೀ ಹಗಲೂ ವಿರಾಮವಿರಲಿಲ್ಲ. ಇವರಿಗೆ ನಿದ್ದೆಯಿಲ್ಲ, ಊಟವಿಲ್ಲ. ರಾಯಚೂರಿಗೆ ರಾಯಚೂರೇ ಇವರ ಗುಲಾಮನಾಯಿತು. ವೈದ್ಯ ಕಲಿಯಲಿಕ್ಕೆಂದು ಕೆಲವರು, ಯೋಗ ಸಾಧಿಸಲೆಂದು ಕೆಲವರು, ಶುಶ್ರೂಷೆಗೆಂದು ಕೆಲವರು, ಸಹವಾಸಕ್ಕೆಂದು ಕೆಲವರು, ಅನುಚರರು ಬಂದು ಸೇರಿದರು. ಸದಾ ಯಾರಾದರೊಬ್ಬರು ಇರುತ್ತಿದ್ದರು. ಏನಾದರೊಂದು ಪ್ರಸಂಗ ನಡದೇ ಇರುತ್ತಿತ್ತು. ಮನೆ ಮಠವಾಯಿತು. ಹೆಸರೂ ಬೆಳೆಯಿತು.

ಆ ಹೊತ್ತಿನಲ್ಲೇ 'ಹಿಂದೂ' ಪತ್ರಿಕೆಯಲ್ಲಿ ಲೇಖನಗಳು ಬಂದದ್ದು.

* * * *

ಅವರು ಒಡೆಯದ ವಿಗ್ರಹವಿಲ್ಲ. ಟೀಕಿಸದ ನಾಯಕನಿಲ್ಲ. ಭೇದಿಸದ ಸಂಪ್ರದಾಯವಿಲ್ಲ. ಬಿಚ್ಚದ ಗ್ರಂಥಿಯಿಲ್ಲ. ಹಳಿಯದ ಮತವಿಲ್ಲ.

ಅದೊಂದು ಅದ್ಭುತವಾದ ಬೆಂಕಿ. ಅದಮನೀಯವಾದ ಪ್ರವಾಹ; ಮಹಾಪೂರ. ದಯೆಯಿಲ್ಲ, ದಾಕ್ಷಿಣ್ಯವಿಲ್ಲ; ಅಡ್ಡಬಂದದ್ದು ಕೊಚ್ಚಿ ಹೋಗಲೇ ಬೇಕು. ತನ್ನೊಡನೆಯೆ ತೇಲಿ ಬಂದದ್ದಕ್ಕೂ ಸುಖವಿಲ್ಲ. ಶಾಂತಿಯಿಲ್ಲ. ಹುಚ್ಚು ಹೊಳೆ. ಯಾವ ಗಳಿಗೆಗೆ ಯಾವ ಬಂಡೆಯೋ !

ರಾಯರು ಸಂಪ್ರದಾಯ ವಿರೋಧಿಗಳು, ಹಳೆಯದಕ್ಕೆಲ್ಲ ಹಗೆಗಳು ಎಂದು ಹೆಸರು ಜನರಲ್ಲಿ. ಅವರ ಕೆಲವು ಕ್ರೂರ ಟೀಕೆಗಳೂ ವಿಮರ್ಶೆಯ ಸರಣಿಯೂ ಅಂಥ ಅಭಿಪ್ರಾಯಕ್ಕೆ ಕಾರಣವಿರಬಹುದು. ಮೂಢ ಮತಮತಾಂತರ, ರೂಢ ಮತಮತಾಂತರಗಳ ಮೇಲಿನ ಅವರ ದಾಳಿಯೂ ಹಾಗೇ. ಸ್ತ್ರೀ ಸ್ವಾತಂತ್ರ್ಯದ ಸಮರ್ಥನದ ಬಗ್ಗೆ ಅವರು ತುಳಿದ ಹಾದಿಯೂ ಅದೇ; ಪುರುಷರ ದಬ್ಬಾಳಿಕೆಯ ವಿರೋಧ. ಅವರ ಸ್ವಭಾವವೇ ಹಾಗೆ; A spirit of challenge. ಸಹಜವಾಗಿ ರಾಯರು ಯೋಧರು. ನಾಲದ್ದಕ್ಕೆ ಅಭಿನಯದ ರಕ್ತ ಬೇರೆ ಮೈಯಲ್ಲಿ. ಅವರ ತಂದೆ ಒಂದು ನಾಟಕ ಕಂಪನಿ ಮುಖಂಡರಾಗಿದ್ದರಂತೆ.

ಆದರೆ, ಹಳೆಯ ಪೌರಾಣಿಕ ನಾಟಕಗಳಿಗೆ ಹೊಸ ಆಧ್ಯಾತ್ಮಿಕ ಅರ್ಥ ಹಚ್ಚಿ ಹೊಸದೊಂದು ಹಾದಿ ತೋರಿದರು. ಧ್ರುವಚರಿತ್ರೆಯ ಉತ್ಥಾನಪಾದರಾಯ – ಜೀವ. ಸುನೀತಿ, ಸುರುಚಿ ಅವನ ಹೆಂಡಿರು. ರುಚಿಯ ಹಾದಿಯಲ್ಲಿ ಉತ್ತಮ ಇಹಸುಖ. ನೀತಿಯ ಹಾದಿಯಲ್ಲಿ ಧ್ರುವ, ಮೋಕ್ಷ. ಬೇಲೂರು ಕೇಶವದಾಸರ ಇತ್ತೀಚಿನ ಹರಿಕಥೆಗಳ ಆಧ್ಯಾತ್ಮಿಕ ಅರ್ಥದ ಸ್ಫೂರ್ತಿಗೆ ಕಾರಣ ರಾಯರು ಎಂದು ಕೇಳಿ ಬಲ್ಲೆ.

ನಿಷ್ಠುರ ಬ್ರಹ್ಮಚಾರಿ; ಬ್ರಹ್ಮಚರ್ಯದ ಬಾವುಟ ಹಿಡಿದು Marriage is Marrage of spirit– ಮದುವೆ ಆತ್ಮದ ಮಾರಣ ಎಂದು ಸಾರಿದವರು; ಇಳಿವಯಸ್ಸಿನಲ್ಲಿ ಮದುವೆಯಾದರು. ಮಾಡುವುದು ದಯೆ ದಾಕ್ಷಿಣ್ಯವಿಲ್ಲದ ದುರ್ನೀತಿ ದುರ್ಗುಣಗಳ ಖಂಡನೆ; ಪರಿವಾರ ಮಾತ್ರ 'ಅಜ್ಞಾನಿ' ಗಳ ತಂಡ. ಪರಿವಾರಕ್ಕೆ ಅವರು ತೋರುವ ದಯೆ, ಸಹನೆ, ಪ್ರೇಮಕ್ಕೂ ಆಚೆಯದು; ಕೈಯೊಳಗಿನ ವಿದ್ಯಾರ್ಥಿಗಳಿಗೆ ಮಾತ್ರ ರುದ್ರಮೂರ್ತಿ. ಸಮಾಜದ ಬಗ್ಗೆ ಅವರದು ಅಭೇದಬುದ್ಧಿ; ಪರಿಣಾಮ ಸಮಾಜದಲ್ಲಿ ಬುದ್ಧಿ ಭೇದ.

ಇಂಥ ಪರಸ್ಪರ ವಿರೋಧಗಳ, ಪೂರ್ವ ಪಶ್ಚಿಮಗಳ ಸಮಸ್ಯೆ ಅವರು. ಅದೊಂದು ವಿಲಕ್ಷಣ, ವಿಚಿತ್ರ ಜೀವ, ಅರ್ಥವಾಗಿಯೂ ಆಗದ ಜೀವ. ಅವರನ್ನು ನರಕಕ್ಕೆ ನೂಕುವವರೂ ಇದ್ದಾರೆ; ಸ್ವರ್ಗಕ್ಕೇರಿಸುವವರೂ ಉಂಟು. ಆದರೆ ರಾಯರು ಇಬ್ಬರಿಗೂ ಸಿಗುವಂತಿಲ್ಲ. ಸ್ವರ್ಗ ನರಕಗಳೆರಡೂ ರೂಢಿಯ ಸಂಕೇತ.

ಮನೆ ಗೆದ್ದು ಮೂರು ಲೋಕ ಗೆದಿ ಎಂದು ನಾಡನುಡಿ. ರಾಯರ ಮತ ಹಾಗಲ್ಲ. ಮೂರು ಲೋಕವನ್ನೆ ಗೆದೆವಾಗ ಮನೆಯವರ ಸುದ್ದಿಯೇನು ಬಂತು? ಲೋಕ ಗೆದೆಯಲು ಹೋಗಿ ಮನೆಯನ್ನು ಒದ್ದರು. ಲೋಕ ಕೈಗೆ ಸಿಗಲಿಲ್ಲ; ಮನೆಮಾತ್ರ ಮುರಿಯಿತು.

'ಪ್ರೇಮಾಯತನ' ವು ಮೊದಲು ಗುಡಿಸಿಲುಗಳ ಗುಂಪಾಗಿತ್ತು. ಆಶ್ರಮವಾಸಿಗಳೂ ಕಷ್ಟಪಟ್ಟು ಕಟ್ಟಿದರು. ತಿನ್ನಲು ಸಪ್ಪನೆ ಕೂಳು, ಮಲಗಲು ಈಚಲಚಾಪೆ.

ಈಗ ಅಲ್ಲಿ ಒಂದು ಬಂಗಲೆಯಿದೆ. ಬಂಗಲೆಗೆ ಬೇಕಾದ ಎಲ್ಲ ಸಲಕರಣೆಯೂ ಇದೆ.

# ಮಾಸ್ತಿ 'ಶ್ರೀನಿವಾಸ' ರು

ಸಣ್ಣ ಕತೆಗಳ 'ಶ್ರೀನಿವಾಸ'ರ ಪರಿಚಯವು ಯಾರಿಗಿಲ್ಲ ? ಸದ್ಯದ ಕನ್ನಡ ಸಾಹಿತ್ಯದಲ್ಲಿ ಆಚಾರ್ಯ ಪದವಿಯುವರದು. ಸಣ್ಣಕತೆಗಳನ್ನು– ದೊಡ್ಡಕತೆಗಳನ್ನು, ಚಿಕ್ಕದೃಶ್ಯಗಳನ್ನು–ದೊಡ್ಡ ನಾಟಕಗಳನ್ನು ಅವರು ಬರೆದಿದ್ದಾರೆ; ಬಿನ್ನಹ, ಅರುಣ, ತಾವರೆ, ಚೆಲುವು ಈ ಕವನ ಸಂಗ್ರಹ ಗಳನ್ನು ಪ್ರಕಟಿಸಿದ್ದಾರೆ. ವಿಮರ್ಶೆಗಳನ್ನೂ ವಿಮರ್ಶಾತತ್ತ್ವಗಳನ್ನೂ ವಿವರಿಸಿದ್ದಾರೆ. ಕನ್ನಡ ಸಂಸ್ಕೃತಿಯ ವಿಚಾರವನ್ನು ಮಾಡಿದ್ದಾರೆ. ಸಾಹಿತ್ಯಸಮ್ಮೇಲನಕ್ಕೆ ಅಧ್ಯಕ್ಷಪದವಿಯಲ್ಲಿ ನಿಂತು ಮಾರ್ಗವನ್ನು ತೋರಿಸಿದ್ದಾರೆ. ಉಪನ್ಯಾಸಗಳಿಂದ ಸಾಹಿತ್ಯಪ್ರಚಾರವನ್ನು ಮಾಡಿ ದ್ದಾರೆ. ಹಿರಿಯರಲ್ಲಿ ಆದರವನ್ನೂ ಕಿರಿಯರಲ್ಲಿ ವಿಶ್ವಾಸವನ್ನೂ ಇಟ್ಟು, ಹಳೆಯದರ ಗುಣಗ್ರಾಹಕತೆಯನ್ನೂ, ಹೊಸದರ ಗುಣವಿಮರ್ಶೆಯನ್ನೂ ಮಾಡಿ, ತಮ್ಮ ಸಮತೂಕವನ್ನು ಬಿಟ್ಟಿಲ್ಲ. ಭಿನ್ನ ಸಾಹಿತ್ಯಗಳ ಪರಿಚಯ ವಿದ್ದರೂ ಇವರ ಸಾಹಿತ್ಯವು ಅವುಗಳಿಂದ ಉಪಜೀವನವನ್ನು ನಡೆಸಿಲ್ಲ. ಸಾಹಿತಿಗಳು ಜೀವನವನ್ನು ಬಣ್ಣಿಸುತ್ತಲೆ ಅಸಾರ ಸಂಸಾರವು ಸಸಾರ ವಾಗುವದು. ಇವರ ಕತೆಗಾರಿಕೆಯಿಂದ ಕನ್ನಡ ಜೀವನಕ್ಕೆ ಜೀವಕಳೆ ಬಂದಿದೆ. ಇವರ ವಿಮರ್ಶಾಪದ್ಧತಿಯಿಂದ ಕಾಣದ ಬೆಲೆಗಳು ತೋರ ಹತ್ತಿವೆ. ಇವರ ಶೀಲದ ಶೈಲಿಯಿಂದ ಕನ್ನಡನಾಡು ಒಂದಾಗಿ ಹೊಂದಿ ಕೊಳ್ಳುತ್ತಲಿದೆ. ಇವರ ಆಚಾರ್ಯಪದವಿಯು, ಹೆದರಿ ಕೊಟ್ಟಿದ್ದಲ್ಲ; ಗೌರವಾರ್ಥವಾಗಿ ಸಲ್ಲಿಸಿದ್ದಲ್ಲ; ಒಂದು ಕೂಟದವರ ಮಾಟವಲ್ಲ;

ಕೋಮುವಾರು ಪ್ರಾಂತವಾರು ಪಾಲುಗಾರಿಕೆಯಲ್ಲಿ ಬಂದದ್ದಲ್ಲ. ಆಚಾರ್ಯರೆಂಬ ಗೌರವದಲ್ಲಿ ಇವರು ತಮ್ಮ ಆಶೀರ್ವಾದದ ಹಸ್ತದಿಂದ ಬೆಳೆಯುವವರನ್ನು ಕುಗ್ಗಿಸಿಲ್ಲ, ಅಭಯಹಸ್ತದಿಂದ ಹೆದರಿಸಿಲ್ಲ, ವರದ ಹಸ್ತದಿಂದ ಬಾಗಿಸಿಲ್ಲ. ಹೊಟ್ಟೆಗಿಲ್ಲದವರು ಹೋರಾಡುವ ಕಣವಾಗಲಿ, ಬುದ್ಧಿಯಿಲ್ಲದವರು ಸುತ್ತಾಡುವ ಬಯಲಾಗಲಿ, ಕೆಲಸವಿಲ್ಲದವರು ಕೂಗಾಡುವ ಕೂಟವಾಗಲಿ ಈ ಸಾಹಿತ್ಯಕ್ಷೇತ್ರವಲ್ಲವೆಂಬುದು ಕೆಲವು ಪದವೀಧರ ಮಹಾಶಯರುಗಳಿಗೆ ಇವರಂಥವರ ಉದಾಹರಣೆಗಳಿಂದ ಸ್ವಲ್ಪ ಹೊಳೆದಂತಾಗಿದೆ. ಇಂಥ ಜೀವಕ್ಕೂ ಜೀವನಕ್ಕೂ 'ಆಚಾರ್ಯ' ಎನ್ನದಿದ್ದರೆ 'ಆಚಾರ್ಯ' ಶಬ್ದದ ಅರ್ಥವನ್ನು ವ್ಯವಹಾರಕ್ಕೆ ಸರಿಯಾಗಿ ಬದಲಾಯಿಸಬೇಕಾಗಬಹುದು.

ಆದರೆ ಇವರ ಮೂರ್ತಿಯು ಇವರ ಗೌರವಕ್ಕೆ ವಿಸದೃಶ್ಯವಾಗಿ ಲಘುವಾಗಿದೆ. ಇವರ ಮೂಮೂಲಿಯ ಮಾತುಗಾರಿಕೆಯು, ಕತೆಗಾರನ ಸರಸತೆಯನ್ನು ನಗೆಯಾಡುವಂತೆ, ತಾತ್ತ್ವಿಕನ ನೀರಸ–ವಿರಸಗಳ ಮಾರ್ಗವಾಗಿ ರಸವರ್ಜ್ಯ ಸತ್ಯಲೋಕದ ಶುಭ್ರತೆಯನ್ನು ಸೇರುವದು. ಇವರ ಪತ್ರವ್ಯವಹಾರದಲ್ಲಿ ಸಾಹಿತಿಯ ಕುರುಹನ್ನೂ ಕಾಣುವದು ಬಿಗಿ. ಈ ರಸಿಕತೆಯ ಬಡತನಕ್ಕೆ ಕಾರಣವೇನೊ ! ಪರಾಧೀನ ಬಾಲ್ಯಸಂಸ್ಕಾರವೋ ? ಮಿತವ್ಯಯದ ಶೈಲಿಯೋ ? ಕಾಲಭಕ್ಷಕವಾದ ಹೊಟ್ಟೆಯ ಹೋರೆಯ ಕೊರತೆಯೋ ? ಏನು ಸತ್ಯಸೌಂದರ್ಯಗಳ ಏರಾಟದಲ್ಲಿ ಬಣ್ಣಕ್ಕಿಂತಲೂ ಕಣ್ಣೇ ಮೇಲು ಎಂಬ ಅನುಭವದ ಆಂತರಿಕ ನಿಗ್ರಹವೊ ? ಇವರು ಸೌಂದರ್ಯಕ್ಕೆ ಕಡಿಮೆ ಬೆಲೆ ಕೊಡುತ್ತಿರಬಹುದೇ ? ಇವರ ಪದ್ಯಗಳಲ್ಲಿ ಗದ್ಯಕ್ಕೂ ಆಭಾಸವೆನಿಸುವ ಸಾಲುಗಳು ತಲೆಯೆತ್ತುವದಕ್ಕೆ ಇದೇ ಕಾರಣವಿರಬಹುದೇ? ಹಾಗಿರಲಾರದು. ಅದ್ವೈತದ ಜನ್ಮಭೂಮಿಯಾದ ಶೃಂಗೇರಿಯಲ್ಲಿ ಋಷ್ಯಶೃಂಗನನ್ನು ಜನಪದ ಕಥೆಯ ಆಧಾರದಿಂದ ನಿಲ್ಲಿಸಿ-ಜಗತ್ತಿನ ಸೌಂದರ್ಯವು ಮಾಯೆಯಿರಲಾರದು-ಎಂದು ಆಡಿಸಿದ; ಸಂಸಾರದಲ್ಲಿಯೇ ಇದ್ದು ತತ್ತ್ವಚಿಂತನೆ ಮಾಡಿದರೆ ಕೊರತೆಯೇನು ಎಂದು ಸಾವಿತ್ರಿಯಿಂದ ಯಮನಿಗೆ ಪ್ರಶ್ನೆ ಮಾಡಿಸಿದ; ಹೆಣ್ಣು ಸೂಜಿಗಲ್ಲು ಗಂಡು ಸೂಜಿ–ಎಂದು ಶ್ರೀಶಾರದಾಂಬೆಯಿಂದಲೆ ನುಡಿಯಿಸಿದ

'ಚೆಲುವಿ'ನ ಕವಿಗಳು ರೂಪವಿಲಾಸವು ಮೋಗರೆಯು ಸಿಂಗಾರವೆಂದು ತಿಳಿದಿರಲು ಸಾಧ್ಯವೇ ? ಹಾಗೆ ತಿಳಿದಿರದಿದ್ದರೂ ಸತ್ಯವನ್ನು ಸೌಂದರ್ಯಸಾರವೆನ್ನುವದಕ್ಕಿಂತ ಸೌಂದರ್ಯವನ್ನೆ ಸತ್ಯದ ಆವಿಷ್ಕಾರವೆಂದು ತಿಳಿಯುವದು ಮೇಲೆಂದು ಇವರು ಬಗೆದಂತೆ ತೋರುವದು. ಅರಿವಿಗೂ ಇರುವು ಮೇಲು ಇವರಿಗೆ. 'ಒಂದು ಹಳೆಯ ಕಥೆ'ಗೂ 'ಇನ್ನೊಂದು ಹಳೆಯ ಕಥೆ'ಗೂ ಇರುವ ಅಂತರವೇ ಅದು. ಇವರ ಕತೆಗಾರಿಕೆಯ ಅಂತಃಸಾರವು ಜೀವರುಗಳ ಜೀವನದ ಸತ್ಯವನ್ನು ಚುಕ್ಕೆಯಂತೆ ಮಿನುಗಿಸುವದರಲ್ಲಿದೆ. ಜೀವನದ ಸ್ಥಾಯಿಯನ್ನು ಇವರು ಗುರುತಿಸಿದ್ದಾರೆ. ಅವರ ನಕ್ಕು ನಗಿಸುವ ನಗೆ, ಅವರ ಶೃಂಗಾರದ ಬಗೆ–ಇವು ಸಂಚಾರಿಗಳು. ಸಂಚಾರಿಯು ದೃಷ್ಟಿಯನ್ನೆಳೆಯುವಂತೆ ಸ್ಥಾಯಿಯು ಎಳೆಯುವದಿಲ್ಲ. ತಿರುಗುವ ನಕ್ಷತ್ರಮಂಡಲವನ್ನು ಬಿಟ್ಟು ಧ್ರುವನನ್ನು ನೋಡುವವರಾರು ? ಇವರ 'ರಂಗಪ್ಪ' 'ಸುಬ್ಬಣ್ಣ' 'ಇಂದಿರೆ' 'ಬೀದಿಯೊಳಗಿನ ನಾರಿ' 'ಕೃಷ್ಣಸ್ವಾಮಿ' ಮೊದಲಾದ ರಸಿಕರನ್ನು ತರುಣರು ಮರೆಯುವದು ಹೇಗೆ ? 'ಆನಂದ'ರ ಕತೆಗಾರಿಕೆಯು ಈ ಸಿಂಗಾರದ ಬಂಗಾರದ ತಂತಿಯಿಂದಲೆ ತನ್ನ ಭೂಷಣಗಳನ್ನು ಇನ್ನೂ ಹೆಣೆದುಕೊಳ್ಳುತ್ತಲಿದೆ. 'ಶ್ರೀನಿವಾಸ'ರು ಕತೆಯ ಸ್ವಾರಸ್ಯವನ್ನು ಅಡ್ಡಕತೆಗಳಿಂದ ಹಿಗ್ಗಿಸುವದುಂಟು. ಆದರೆ ಅಡ್ಡಕತೆಯು ಉದ್ದ ಕತೆಯನ್ನು ತಿಂದು ಬಿಡಬಾರದು. ಶ್ರೀ. ಗೊರೂರ ರಾಮಸ್ವಾಮಿಯವರು ತಮ್ಮ ಹಳ್ಳಿಯ ರಸಿಕರ ಚಿತ್ರಗಳಲ್ಲಿ ಈ ತೊಡಕಿನಲ್ಲಿ ತೊಳಲಾಡುವದೂ ತೂಗಾಡುವದೂ ಉಂಟು. 'ಹಾವಿನ ಅಯ್ಯ'ನು 'ಮಲ್ಲಿಗೆ ಹಳ್ಳಿಯ ಒಯಲಾಟ'ದ ಶ್ರೀಕಂಠಾಚಾರ್ರು 'ನಮ್ಮ ಮೇಸ್ಟರು' ನಿಂತ ನೆಲೆಗೆ ಬರುವರೇ ? ಶ್ರೀ. ಗೊರೂರು ರಾಮಸ್ವಾಮಿಯವರು ಸಹಜಹಾಸ್ಯದ ಸುಳಿಯನ್ನು ಕಂಡು ಹಿಡಿದಿದ್ದಾರೆ. ಆದರೆ ಆ ಹಾಸ್ಯದ ಬೆಳಕಿನಲ್ಲಿ ಮೂರ್ತಿಯು ಮುಕ್ಕಾಗಬಾರದು. 'ಆನಂದಕಂದ'ರ ಕತೆಗಳಲ್ಲಿ ಸ್ವಭಾವದ ಬಳ್ಳಿಯು ಹಬ್ಬಿಕೊಳ್ಳುವದು; ಆದರೆ ಸ್ವರೂಪದ ಹೂವನ್ನು ಅರಳಿಸುವದರಲ್ಲಿ ಕತೆಗಾರನ ಸಾರ್ಥಕತೆಯಿದೆ. 'ಶ್ರೀನಿವಾಸ'ರು ವಿವಿಧ ಜೀವರುಗಳ ಸ್ವರೂಪವನ್ನು ಮೂಡಿಸಿದ್ದಾರೆ. 'ಆಯೇಷಾ' 'ಕಾಮನ ಹಬ್ಬ'ದ ಮುತ್ತೈದೆ 'ಲಲಿ

ತಮ್ಮ' 'ಉಷಾ' ಒಂದೊಂದು ಜೀವ ಒಂದೊಂದು ರೂಪ. ಇವರ ಪುರುಷಸೃಷ್ಟಿಗಿಂತ ಸ್ತ್ರೀಸೃಷ್ಟಿಯು ಮೇಲು—ಅಥವಾ ಇವರ ಸೃಷ್ಟಿಯೆ ಅದು. ಗಾಳಿಯಲ್ಲಿ ಸೂಲು ತೆಗೆಯುವ 'ಕೃಷ್ಣಕುಮಾರ'ರ ಹಾಗು 'ಪಿ. ಟಿ. ನರಸಿಂಹಾಚಾರ್ಯ'ರ ಶೈಲಿಯು ಬೇರೆ ಜಾತಿಯದು. ಅವರು ಸ್ವರೂಪಾವಿಷ್ಕರಣದಲ್ಲಿ 'ಕಣಭಕ್ಷಕ'ರು; ವಾಯುವಿಹಾರಿಗಳು. 'ಅ. ನ. ಕೃ' ಅವರೂ 'ಪ್ರಬುದ್ಧ ಕರ್ನಾಟಕ'ದೊಳಗಿನ ಕತೆಗಾರರೂ ತಮ್ಮ ತಮ್ಮ ಹಾದಿಗಳನ್ನು ಹುಡುಕಿಯೋ ಹುಡುಕುತ್ತಲೋ ಇದ್ದರೂ, 'ಶ್ರೀನಿವಾಸ'ರನ್ನು ಕತೆಗಾರರಿಗೆ 'ಆದ್ಯ'ರೆಂದು ತಿಳಿಯುತ್ತಿರುವಲ್ಲಿ ಸಂದೇಹವಿಲ್ಲ. ಹೀಗಾಗಿ ಕತೆಗಾರಿಕೆಯಲ್ಲಿ 'ಶ್ರೀನಿವಾಸ'ರ ಕೈಹಿಡಿಯುವವರಾಗಲಿ ಕೈಹಿಡಿಯದವರಾಗಲಿ ಕಡಿಮೆ. ಇವರ ಆಚಾರ್ಯತ್ವದ ಬೀಜವೇ ಇಲ್ಲಿದೆ. ಇವರ ಮೇಲ್ಮೆಯು ಕತೆಗಳ ಮೊತ್ತದಲ್ಲಲ್ಲ, ಕತೆಗಳ ಸತ್ತ್ವದಲ್ಲಿ. ವಿಶ್ವಸಾಹಿತ್ಯದ ಯಾವ ಸಣ್ಣಕತೆಗೂ ಅವು ಎದೆಗೊಟ್ಟು ಹೆಗಲು ಹಚ್ಚಿ ನಿಲ್ಲಬಲ್ಲವು. ಇವರ ಕತೆಗಾರಿಕೆಯ ಬಲವು ಹೆಚ್ಚಿನದು. ಅದು ಕವನಗಳನ್ನೂ ತನ್ನ ಕುಲಕ್ಕೆಳೆದಿದೆ. 'ಮುದಲಿಂಗನ ಕಣಿವೆ'ಯೂ 'ಮಲ್ಲಮ್ಮ' 'ಮಾಂಬಿ' ಮೊದಲಾದುವೂ ಅದಕ್ಕೆ ಉದಾಹರಣೆಗಳು.

ಒಂದು ಮಾತಿನಲ್ಲಿ ಇವರ ಎದೆಗಾರಿಕೆಯು ಎದ್ದು ತೋರುವದು. ಹೆಣ್ಣು ಎಂದರೆ ಕಣ್ಣುಬಿಡುವ ರಸಿಕತೆಗೆ ಇವರು ಒಳ್ಳೇ ಅಂಜನವನ್ನು ಹಾಕಿರುವರು. ಯಾವ ಮಾತು—ಸಂದರ್ಭಗಳಲ್ಲಿ ಮೂಢಬುದ್ಧಿಗೆ ಅಶ್ಲೀಲತೆಯ ಧ್ವನಿಯು ಹುಟ್ಟಬಹುದೋ ಅಂಥ ಮಾತು—ಸಂದರ್ಭಗಳನ್ನು ಸಲೀಲವಾಗಿ ಸಾತ್ವಿಕಸುಖದ ಒಂದು ರಾಗದಿಂದ ರಂಜಿತವಾಗುವಂತೆ ಮಾಡುವ ಬುದ್ಧಿಯ ಸೂಕ್ಷ್ಮತೆಯೂ ಮಾತಿನ ಜಾಣ್ಮೆಯೂ ಅವರವು. ಬರವಣಿಗೆಯಲ್ಲಷ್ಟೇ ಅಲ್ಲ, ಇವರ ಇರುವಳಿಕೆಯಲ್ಲಿಯೂ ಅದು ಮುದ್ರಿತವಾಗಿದೆ. ಅದು ಇವರಿಗೆ ಸ್ವಭಾವಸಿದ್ಧವೋ ಅಭ್ಯಾಸಸಿದ್ಧಿಯೋ ಹೇಳುವದು ಬಿಗಿ. 'ಶಿವಾಜಿ'ಯಲ್ಲಿ ಅಶ್ಲೀಲತೆಯನ್ನು ಕಂಡವರಿಗೆ, ಈ ಸೂಕ್ಷ್ಮವು ಹೊಳೆದಂತೆ ಕಾಣುವದಿಲ್ಲ. ರಸವನ್ನೂ ಆಭಾಸವನ್ನೂ ವಿಂಗಡಿಸಿ ತಿಳಿದುಕೊಳ್ಳುವದು ಆಭಾಸದ ಜೀವನದಲ್ಲಿ ಸುಲಭವಲ್ಲ. 'ಬೀದಿಯಲ್ಲಿ ಹೋಗುವ ನಾರಿ' ಯನ್ನಾಗಲಿ, ಒಂದು 'ಹಳೆಕಥೆ'ಯ

ನ್ನಾಗಲಿ ಬರೆಯುವ ಸಾಹಸವು ಸಾಮಾನ್ಯವಲ್ಲ. ಅದಕ್ಕೆ ಹೊಸ ದೃಷ್ಟಿ ಬೇಕು 'ಶ್ರೀನಿವಾಸ'ರು ಈ ದೃಷ್ಟಿಯುಳ್ಳವರು; ನಿಜವಾಗಿ ಕವಿಗಳು. ಇವರ ಶಬ್ದಕ್ಕೆ ಆ ದೃಷ್ಟಿಯನ್ನು ಉಂಟುಮಾಡುವ ಸಾಮರ್ಥ್ಯವು ಬಚ್ಚಿಟ್ಟಿಸಲ್ಲಿದೆ. ಇವರ ಹಾಸ್ಯವು ಆ ದೃಷ್ಟಿಯು ಕಿರಣಾವಲಿಯು. ಕ್ಷ-ಕಿರಣಗಳಂತೆ ಅದು ಒಳಗಿನ ಹುರುಳನ್ನು ಹೊರಗೆಡಹುವದು. ಇವರ ಹಾಸ್ಯವು ಗೇಲಿಯಲ್ಲ, ನಕಲಿಯಲ್ಲ, ತಮಾಷೆಯಲ್ಲ. ಪದಾರ್ಥದ ರುಚಿಯಿದ್ದಂತೆ ವ್ಯಂಗ್ಯಗುಣವು; ಬಾಡಿಸಿಕೊಳ್ಳುವ ವ್ಯಂಜನಪದಾರ್ಥದಂತೆ ಹೊರಗಿನ ಬದುಕಲ್ಲ. ಹೀಗೆ ಸಿದ್ಧಸಾಹಿತಿಗಳಾದ ಇವರಿಂದ ಆದ ಕೆಲಸವು ದೊಡ್ಡದಿದ್ದರೂ ಆಗಬೇಕಾದ ಕೆಲಸವು ಅದಕ್ಕೂ ದೊಡ್ಡದಿದೆ. ಮಹಾಪುರುಷರ ಮಹಾಜೀವನದ ಅಂತಃಸತ್ತ್ವವನ್ನು ಸುಲಿದುಕೊಡಲು ಮಹಾಪ್ರಬಂಧಗಳನ್ನೂ, ಮಹಾಕಥೆಗಳನ್ನೂ ಬರೆಯಲು ಇಂಥವರು ಸಮರ್ಥರು. ಇಂಥವರ ಸಾಮರ್ಥ್ಯದಿಂದಲೇ ಕನ್ನಡವು ಪ್ರಭಾವಶಾಲೆಯಾಗಿದೆ; ಆಗಬೇಕು. ಇಂಥವರ ಹೆಸರನ್ನೂ ಅರಿಯದ ಮುಕ್ತಪದವೀಧರರು ಕನ್ನಡನಾಡಿನಲ್ಲಿ ಇರುವದು ಯಾವ ಲಕ್ಷಣವೊ ತಿಳಿಯದು. ತಿಳಿದವರಲ್ಲಿಯೂ ಮಾಸ್ತಿಯೆಂದು ಬಲ್ಲವರು 'ಶ್ರೀನಿವಾಸ' ರೆಂಬುದನ್ನು ಕೇಳಿರಲಿಕ್ಕಿಲ್ಲ. 'ಶ್ರೀನಿವಾಸ' ಎಂದು ಓದಿದವರು ಮಾಸ್ತಿ ಎಂಬುದನ್ನು ತಿಳಿದಿರಲಿಕ್ಕಿಲ್ಲ. ಅಂತೆಯೇ-ಬೆಂಗಳೂರೂ ಬೇಡ, ಮಯಿಸೂರೂ ಬೇಡ, ಮಯಿಳೂರು ಎಂದಂತೆ ನಾನು ಪ್ರಾರಂಭದಲ್ಲಿ ಮಾಸ್ತಿ ಶ್ರೀನಿವಾಸರು ಎಂದಿದ್ದೇನೆ.

ತಾವು ದೊಡ್ಡ ಸಂಬಳದ ದೊಡ್ಡ ಅಧಿಕಾರಿಗಳ ವರ್ಗಕ್ಕೆ ಸೇರದೆ ಶಿಕ್ಷಕವರ್ಗಕ್ಕೆ ಸೇರಿದ್ದರೆ, ತಮ್ಮ ಸಾಹಿತ್ಯಸೇವೆಗೆ ಹೆಚ್ಚು ಹಿತವಾಗ ಬಹುದಾಗಿತ್ತೋ ಎಂದು ಇವರು ಒಮ್ಮೊಮ್ಮೆ ಯೋಚಿಸುವದುಂಟು. ಆದರೆ ಶಿಕ್ಷಕವರ್ಗಕ್ಕೆ ಸೇರಿದವರು ಎಷ್ಟು ಜನರು ತಪ್ಪದೆ ಹೆಚ್ಚಿನ ಸಾಹಿತ್ಯ ಸೇವೆ ಮಾಡುತ್ತಲಿದ್ದಾರೆ ? ಸಾಹಿತ್ಯಸೇವಾಸಂಕಲ್ಪವೇ ಇದ್ದರೆ ಎಂಥ ಅಧಿಕಾರವೂ ಅದಕ್ಕೆ ತಡೆಯುಂಟು ಮಾಡಲಾರದೆಂಬುದನ್ನು ಕೆಲವರ ಚರಿತ್ರವು ವ್ಯಕ್ತಪಡಿಸುವದಿಲ್ಲವೇ ? ಇಷ್ಟೇ ಅಲ್ಲ. ಮನೋರಥಕ್ಕೆ ತಡೆಯಿಲ್ಲವೆಂಬುದು ಸುಭಾಷಿತವಾದರೂ, ದರಿದ್ರರ ಮನೋ

ರಥಗಳಿಗೆ ಗತಿಯೂ ದೊರೆಯುದೆಂಬುದು ಸತ್ಯವಾಗಿದೆ. ರನ್ನಕವಿಯು,- ದುಡ್ಡುಳ್ಳವರು ದಾನಿಗಳಾಗುವದಾಗಲಿ, ಮಾತರಿವರು ಮತ್ಸರವಿಲ್ಲದವರಾಗಲಿ ಆಗುವದು ಸುಲಭವಲ್ಲ. ಆದಕಾರಣ ದಾನಿಗಳೆ ದುಡ್ಡುಳ್ಳವರಾಗಲಿ, ಮತ್ಸರವಿಲ್ಲದವರೆ ಮಾತರಿವರಾಗಲಿ, ಎಂಬಾಸೆಯನ್ನು ಪ್ರಕಟಿಸಿದಂತೆ; ಗುಣವುಳ್ಳವರು ಅಧಿಕಾರಿಗಳಾಗುವದಾಗಲಿ, ಸಾಹಿತಿಗಳು ಕೃತಿಗಳನ್ನು ಪ್ರಕಟಿಸುವಷ್ಟು ಸಿರಿವಂತರಿರುವದಾಗಲಿ, ಈಗಿನ ಕಾಲದಲ್ಲಿ ಸುಲಭವಲ್ಲ; ಆದಕಾರಣ ಅಧಿಕಾರಿಗಳು ಗುಣವುಳ್ಳವರಾಗಲಿ, ಕೃತಿಗಳನ್ನು ಪ್ರಕಟಿಸಬಲ್ಲ ಸಿರಿವಂತರೆ ಸಾಹಿತಿಗಳಾಗಲಿ, ಏನೇ ಆಗಿ ಕನ್ನಡಕ್ಕೆ ಕಳೆಯೇರಲಿ ಎಂದರೆ ತಪ್ಪೇನು? ಗುಣಿಗಳಾದ ಸಾಹಿತಿಗಳೂ ದಾನಿಗಳಾದ ಅಧಿಕಾರಿಗಳೂ ಆಗುತ್ತಿರುವದು ಕನ್ನಡದ ಏಳ್ಗೆಯ ಚಿನ್ಹ. ಆದರೆ ಧನದಲ್ಲಿಯೂ ಅಧಿಕಾರದಲ್ಲಿಯೂ ಗುಣಗಳನ್ನೂ ಸಾಹಿತ್ಯರಸಿಕತೆಯನ್ನೂ ನುಂಗಿಬಿಡುವ ದುರ್ಗುಣವಿದೆ. ಹೀಗಿದ್ದರೂ ಸತ್ತ್ವಶಾಲಿಗಳ ಸತ್ತ್ವವು ಉಪಕರಣಗಳ ಅನುಕೂಲತೆಯಲ್ಲಿಲ್ಲ. ಎಂಥ ಉಪಕರಣಗಳನ್ನೂ ಉಪಕಾರಕಗಳಾಗಿ ಮಾರ್ಪಡಿಸಬಲ್ಲ ಸಾಮರ್ಥ್ಯದಲ್ಲಿದೆ-ಎಂಬುದನ್ನು ಮರೆಯಲಾಗದು. ಸಾಹಿತ್ಯಾಚಾರ್ಯರು ಅಧಿಕಾರಿಗಳಾದರೆ ಸಾಹಿತ್ಯದ ಅಧಿಕಾರವೇ ಹಬ್ಬಿದಂತೆ. ಜೀವನ ಸಾಹಿತ್ಯಗಳು ಮತ್ತೆ ಪರಸ್ಪರ ಪೋಷಕಗಳಾದಂತೆ.

# ತಾತಯ್ಯನವರು

ತಾತಯ್ಯನವರು ಎನ್ನುವುದು ವೆಂಕಟಕೃಷ್ಣಯ್ಯನವರಿಗೆ ಮೈಸೂರಿನ ಜನರು ಇಟ್ಟ ಪ್ರೀತಿಯ ಹೆಸರು. ಹಾಗೆ ಕರೆದರೇನೇ ಮೈಸೂರಿನವರಿಗೆ ಸಮಾಧಾನ. ತಾತಯ್ಯನವರಿಗೂ ಆ ಹೆಸರು ಇಷ್ಟ. ಮೈಸೂರು ಜನ, ತಾತಯ್ಯನವರು ಇವರಿಬ್ಬರ ನಡುವೆ ಇರುವ ಸಂಬಂಧವೇ ಅಂಥದು.

ತಾತಯ್ಯನವರು ಬಹಳ ಕಾಲ ಮೈಸೂರು ಮರಿಮಲ್ಲಪ್ಪನ ಹೈಸ್ಕೂಲಿಗೆ ಮುಖ್ಯೋಪಾಧ್ಯಾಯರಾಗಿದ್ದರು. ಆಗ ಅದರ ಕಳೆ ಬೇರೆ ಇತ್ತು. ಸ್ವಾತಂತ್ರ್ಯಬೇಕು, ಕರಿಕ್ಯುಲಂದ ಕಟ್ಟುಗಳು ಬೇಡ, ಪಾಠ ರಸವಂತವಾಗಿರುವಂತೆ ಸ್ವತಂತ್ರ ಅಭ್ಯಾಸದ ತಾಸು ಬೇಕು– ಎಂಬ ಕೂಗು ಈಗ ಎಲ್ಲಾ ಶಾಲೆಯಲ್ಲೂ ಇದೆ. ತಾತಯ್ಯನವರ ಕಾಲದಲ್ಲಿ ಓದಿದವರನ್ನು ಕೇಳಿದರೆ ತಿಳಿಯುತ್ತೆ; ಇವೆಲ್ಲ ಇದ್ದವು, ಇನ್ನೂ ಹೆಚ್ಚಾದುದೆಲ್ಲ ಇತ್ತು ಎಂದು. ಅವರ ಪಾಠದಲ್ಲಿ ಪರೀಕ್ಷೆಯು ಅವಾಂತರವಿರಲಿಲ್ಲ. ಭೂಗೋಲ ಚರಿತ್ರೆಗಳ ಹೆಸರುಗಳನ್ನು ತಲೆಯೊಳಗೆ ತುರುಕುತ್ತಿರಲಿಲ್ಲ. ಅವರ ಪಾಠ ಎಂದರೆ ಪುರಾಣವಿದ್ದ ಹಾಗೆ, ಹರಿಕಥೆಯಿದ್ದ ಹಾಗೆ.

ಈಗ ಕೂಡ ಗಾಂಧಿ, ದಾಸರ ಮಾತು ಪಾಠದ ನಡುವೆ ಹೇಳುವದಕ್ಕೆ ಎಷ್ಟೋ ಜನ ಉಪಾಧ್ಯಾಯರಿಗೆ ಹೆದರಿಕೆ. 'ಅದೆಲ್ಲಾ ಹೇಳಬಾರದು....ಅಂದರೆ, ಕ್ಲಾಸಿನಲ್ಲಿ.' ಉಪಾಧ್ಯಾಯರೊಬ್ಬರು ಮೊನ್ನೆ

ವೊನ್ನೆ ಹೇಳಿದರು ನನಗೆ. ೩೦ ವರ್ಷಗಳ ಹಿಂದೆಯೇ ತಾತಯ್ಯನವರು ವಿದ್ಯಾರ್ಥಿಗಳಿಗೆ ಗೋಖಲೆ, ದಾದಾಭಾಯಿ, ತಿಲಕರ ಹೆಸರು ತಿಳಿಸಿ ಬಿಟ್ಟಿದ್ದರು. ಜಗತ್ತಿನಲ್ಲಿ ಎಲ್ಲ ದೊಡ್ಡವರ ಹೆಸರೂ ಕಥೆಗಳೂ ಮೈಸೂರಲ್ಲಿ ಹುಡುಗರಿಗೆ ಗೊತ್ತಿತ್ತು. ಗ್ಲಾಡ್‌ಸ್ಟನ್, ವಾಷಿಂಗ್‌ಟನ್, ಮಾರ್ಲೆ, ಮಿಲ್, ಸ್ಪೆನ್ಸರ್ ಮುಂತಾದವರ ಬಗ್ಗೆ ತಾತಯ್ಯನವರಿಗೆ ತುಂಬಾ ಅಭಿಮಾನ. ಅವರ ವಿಷಯ ಯಾವಾಗಲೂ ಹೇಳುವದು ಅವರ ರೂಢಿ. ತಾತಯ್ಯನವರ ಶಿಷ್ಯರಾಗಿ ದೇಶಾಭಿಮಾನದ, ಸಮಾಜ ಸೇವೆಯ ಮಹತ್ವವನ್ನು ಎಳೆತನದಲ್ಲೇ ಗ್ರಹಿಸಿದವರು ಬಹಳ ಮಂದಿ ಮೈಸೂರಿನಲ್ಲೀಗ ಮುಖಂಡರಾಗಿದ್ದಾರೆ. ಪ್ರಭುತ್ವದ ಅಧಿಕಾರದಲ್ಲೇನು, ಪ್ರಜಾವರ್ಗದ ನಾಯಕಪದವಿಯಲ್ಲೇನು– ಈಗ ಮೈಸೂರಲ್ಲಿ ಕಂಡುಬರುವ ಸ್ವಾತಂತ್ರ್ಯದ ಪ್ರೀತಿ, ತಾತಯ್ಯನವರ ಮಹಾ ಪ್ರಸಾದ.

ತಾತಯ್ಯನವರ ಸ್ವಾತಂತ್ರ್ಯಪ್ರೀತಿ ಬಹಳ ದೃಢವಾದುದು; ಅದೊಂದು ಅವರ ಹುಟ್ಟುಗುಣ. ಪ್ರಜಾಪ್ರತಿನಿಧಿ ಸಭೆ, ನ್ಯಾಯವಿಧಾಯಕ ಸಭೆ, ಪೌರಸಭೆಗಳಲ್ಲಿ ಅವರು ಅನುಸರಿಸಿದ ರೀತಿಯೇ ಅದಕ್ಕೆ ಸಾಕ್ಷಿ. ಎಷ್ಟೋ ಸಲ ಅವರ ಸ್ವಾತಂತ್ರ್ಯಪ್ರೀತಿ ಅವರಿಗೆ ಶತ್ರುವಾಗಿದೆ. ಅವರಿಗೆ ಅರಮನೆಯಿಂದ ಬರುತ್ತಿದ್ದ ಸಂಭಾವನೆಗೆ ಸಂಚಕಾರ ಕೊಟ್ಟಿತು. 'ಸಾಧ್ವೀ, ಸಂಪದಭ್ಯುದಯ'ಗಳ ಸಾವಿಗೆ ಕಾರಣವಾಯಿತು. ಸ್ವಾರ್ಥಪರರ ಸಹಸ್ರನಾಮಕ್ಕೆ ಗುರಿಮಾಡಿತು. ಬಡತನದ ಬಾಧೆಗೆ ಬಲಿಕೊಟ್ಟಿತು. ಇಷ್ಟಾದರೂ ತಾತಯ್ಯನವರ ದೃಢ ಚಲಿಸಲಿಲ್ಲ. ಸುವರ್ಣಾಕ್ಷರಗಳಲ್ಲಿ ಬರೆಯಬೇಕಾದ ಚರಿತ್ರೆ ಅವರದು.

ತಾತಯ್ಯನವರ ಸ್ವಾತಂತ್ರ್ಯಪ್ರೀತಿ ಸಂಸ್ಥಾನದ ಹೊರಗಿನ ಕನ್ನಡಿಗರಿಗೆ ತಿಳಿಯುವದಿಲ್ಲ. ಅವರ ಭಾಷೆ ಬೇರೆ; ಸಂಸ್ಥಾನದ ಭಾಷೆ ಬೇರೆ. ಅವರು ಕರ್ನಾಟಕದ ಬ್ರಿಟಿಷ್ ಭಾಗದಲ್ಲಿ ಹುಟ್ಟದೆ ಮೈಸೂರಲ್ಲಿ ಹುಟ್ಟಿದುದು ಮೈಸೂರಿನ ಸುದೈವ; ಕರ್ನಾಟಕದ ದುರ್ದೈವ. ಕರ್ನಾಟಕದಲ್ಲಿ ಮುಂದಾಳುಗಳಿಲ್ಲ, ಹಿರಿಯರಿಲ್ಲ. ಇದ್ದವರಲ್ಲಿ ಸ್ವಾರ್ಥಿಗಳೇ ಬಹಳ; ಸಂಸ್ಕೃತಿಯ ಮಟ್ಟ ಸಾಕಷ್ಟಿಲ್ಲ– ಎಂದು ಬ್ರಿಟಿಷ್ ಕರ್ನಾಟಕವು

ಈಗ ಅನ್ನುತ್ತಿರುವಂತೆ ಆಗ ಅನ್ನಬೇಕಾಗುತ್ತಿರಲಿಲ್ಲ. ಅಖಿಲ ಭಾರತದ ರಾಜಕೀಯ, ಸಾಮಾಜಿಕ ರಂಗದಲ್ಲಿ ಈಗಿದ್ದ ಹಾಗೆ, ಕರ್ನಾಟಕವು ಆಗಸ್ತ್ಯಭ್ರಾತೃವಾಗಿ ಇರುತ್ತಿರಲಿಲ್ಲ. ಶ್ರೀ. ಸಿ. ಆರ್. ರೆಡ್ಡಿಯವರಿಗೂ ತಾತಯ್ಯನವರಿಗೂ ಸಾರ್ವಜನಿಕ ರಂಗದಲ್ಲಿ ಇಷ್ಟಿಲ್ಲದಷ್ಟು ಕುಸ್ತಿಯಾಯಿತು. ಅಂಥವರೇ, ತಾತಯ್ಯನವರು ತಿಲಕರ ಸಮಾನ ಎಂದರು. ಇದು ಬರೀ ಹೊಗಳಿಕೆಯಲ್ಲ, ಚಾಣಾಕ್ಷತನದ ಅನುಭವ.

* * * *

ಸಮಾಜಸೇವೆ, ರಾಜಕೀಯ ಜಗಳದ ರಗಳೆ, ಸಭೆ ಸಮಿತಿ–ಇಂಥ ಗೊಂದಲದಲ್ಲಿ ಬಿದ್ದು ನಾಯಕರಾದವರಿಗೆ, ಉತ್ತಮವಾದ ಇತರ ಗುಣಗಳು, ಹೃದಯದ ಹೂವಾದ ಸಹೃದಯತೆಯ ಗುಣಗಳು ಅವಕಾಶವಿಲ್ಲದೆ, ಅಸ್ಪಷ್ಟವಾಗಿ ಬಾಡಿಹೋಗುತ್ತವೆ. ಕೆಲವು ವೇಳೆ ರಸವಂತ ಜೀವನವು ಅದೃಶ್ಯವಾಗಿ, ಬಾಳು ಗೊಡ್ಡು ನಾಯಕತ್ವದ ವ್ಯವಹಾರವಾಗುತ್ತದೆ. ತಾತಯ್ಯನವರದು ಹಾಗಾಗಲಿಲ್ಲ. ಅರ್ಧ ಶತಮಾನ ಕಾಲ ಅವರು ಹುಡುಗರೊಡನೆ ನಗುತ್ತ ನಲಿಯುತ್ತ ಕಳೆದುದು ಅವರ ಜೀವನದಲ್ಲಿ ಆ ಸಹೃದಯತೆ ಸರಸತೆಯನ್ನು ಮತ್ತಷ್ಟು ದೃಢವಾಗಿ ನಿಲ್ಲಿಸಿಬಿಟ್ಟಿತು. ಅವರ ದಯೆ, ಪರದುಃಖದುಃಖಿತತ್ವ– ಮೈಸೂರಿನವರಿಗೆ ಮನೆಮಾತು. ಅವರ ಕಾಲದಲ್ಲಿ ಓದುವ ಹುಡುಗರಿಗೆ ಅನುಕೂಲ ಕಡಿಮೆ. ಈಗ ಪ್ರಸಿದ್ಧರಾಗಿ ಖಂಡಾಂತರ ಗೌರವ ಗಳಿಸಿದ ಸರ್ ದಿವಾನ ಬಹದೂರರು ಎಷ್ಟೋ ಮಂದಿ ಆಗ ಬೀದಿಯ ದೀಪದ ಬೆಳಕಿನಲ್ಲಿ ಪಾಠ ಓದಿಕೊಳ್ಳುತ್ತಿದ್ದರು. ಭಿಕ್ಷಾನ್ನ ( ಮಾಧುಕರೀ ) ವಾರಾನ್ನಗಳ ಭವಣೆ ಬಹಳ.ಅನ್ನ ಸಿಕ್ಕರೆ, ಇರಲು ಮನೆಯಿಲ್ಲ. ಬೇನೆಯಾದರೆ ಬಂದು ನೋಡುವವರಿಲ್ಲ. ಎಲ್ಲರಿಗೂ ಇದು ಅನುಭವವಾಗಿತ್ತು. ತಾತಯ್ಯನವರಿಗೂ ಶಾಲೆಯಲ್ಲಿ ತಿಳಿದುಬಂತು; ತತ್ಕ್ಷಣವೇ 'ಅನಾಥಾಲಯ' ಆರಂಭವಾಯಿತು. ಅನೇಕ ಬಡ ವಿದ್ಯಾರ್ಥಿಗಳಿಗೆ ಆಶ್ರಯವಾಯಿತು. ಈಗಲೂ ಅದೇ ಕೆಲಸ ಅನಾಥಾಲಯ ಮಾಡುತ್ತಿದೆ.

ಹೆಂಗಸೆಂದರೆ ಸೊತ್ತು, ಜೀತದ ಆಳು ಎಂಬ ಭಾವನೆ ಈಗಲೂ ನಮ್ಮಲ್ಲಿ ಬಹಳ ಮಂದಿ ವಿದ್ಯಾವಂತರಿಗೂ ಹೋಗಿಲ್ಲ. ತಾತಯ್ಯನವರಿಗೆ

ಈಗ ೬೦ ವರ್ಷದ ಕೆಳಗೆಯೇ ಹೆಂಗಸು ಒಂದು ಜೀವ, ಅದಕ್ಕೂ ಸ್ವತಂತ್ರತೆ ಬೇಕು, ಬೆಳವಣಿಗೆ ಬೇಕು ಎನಿಸಿತ್ತು. ಆಗಲೇ ಅವರಿಗೆ ಸ್ತ್ರೀವಿದ್ಯಾಭ್ಯಾಸದ ಹುಚ್ಚು. ಮೈಸೂರಿನಲ್ಲಿ ಈಗ ಸ್ತ್ರೀಶಿಕ್ಷಣದ ಪ್ರಸಾರ ಬೇಕಾದ ಹಾಗೆ ಆಗಿದೆ. ಹಿಂದೆ ಅದರ ಸಸಿಯನ್ನು ಅವರೂ ಅವರ ಗೆಳೆಯರೂ ನಾಟದಿದ್ದರೆ ಇಂದು ಮೈಸೂರು ಹಿಂದುಳಿದಿರುತ್ತಿತ್ತು.

ತಾತಯ್ಯನವರು ಅದ್ಭುತ ಮೇಧಾವಿಗಳು. ಅವರಿಗೆ ಜ್ಞಾಪಕ ಶಕ್ತಿ ಬಹಳ. ಓದಿದುದನ್ನು ಮರೆಯುತ್ತಿರಲಿಲ್ಲ. ಈಗಲೂ ಅವರಿಗೆ ನೆನಪು ಹೆಚ್ಚು. ಇಷ್ಟಿದ್ದರೂ ಅವರ ವಿನಯ ಹೇಳಿ ತೀರದು. ಒಮ್ಮೆ ಅವರೊಂದು ಸಭೆಗೆ ಅಧ್ಯಕ್ಷರಾಗಿದ್ದರು ಆಗ ಹುಡುಗನೊಬ್ಬನು ಒಂದು ನಿಬಂಧವನ್ನೋದಿದ. ತಾತಯ್ಯನವರಿಗೆ ಬಹಳ ಸಂತೋಷವಾಯಿತು. 'ನನ್ನನ್ನು ಕಡಿದರೆ ಈ ಹುಡುಗನಂಥ ಮೂರು ತುಂಡಾಗಬಹುದು. ಆದರೇನು? ಈ ಹುಡುಗನ ಪಾಂಡಿತ್ಯದಲ್ಲಿ ಮೂರರಲ್ಲೊಂದೂ ಭಾಗವೂ ನನಗಿಲ್ಲ' ಎಂದರು. ಗುಣಲೇಶವನ್ನು ಕಂಡರೂ ಬೆಟ್ಟದಷ್ಟಾಗಿ ತಿಳಿದುಕೊಳ್ಳುವ ಔದಾರ್ಯ ಅವರದು.

ತಾತಯ್ಯ ರಸಿಕರೂ ಹೌದು. ಹುಡುಗರಂತೆ ಅವರ ಮನಸು ಬಹಳ ಸರಳ. ಅವರೊಡನೆ ವಿರಾಮವಾಗಿ ಮಾತಾಡಿದವರಿಗೆ ಅದು ಗೊತ್ತು. ಅದನ್ನೆಲ್ಲ ಬರೆಯುವದು ಬಿಗಿ. ಅವರು ಶಾಲೆಯಲ್ಲಿ ಮಾಡುತ್ತಿದ್ದ ಒಂದು ತಮಾಷೆಯನ್ನು ಅವರೇ ಹೇಳುತ್ತಿದ್ದರು. ಹುಡುಗರನ್ನು ಹೊಡೆಯದಿದ್ದರೆ ಪಾಠ ಚೆನ್ನಾಗಿ ನಾಟುವದಿಲ್ಲವೆಂದು ಅವರ ಅಭಿಪ್ರಾಯ. ಈಗ ಪ್ರಧಾನ ಅಧಿಕಾರಿಗಳಾಗಿರುವ ಎಷ್ಟೋ ಜನ ಮೈಸೂರಿನವರು ಅವರಿಂದ ಏಟು ತಿಂದವರೇ. ಮೇಜಿನಲ್ಲಿ ಯಾವಾಗಲೂ ಪೆಪ್ಪರ್‌ಮೆಂಟು ಇಟ್ಟೇ ಇರುತ್ತಿದ್ದರಂತೆ. ಮೊದಲು ಏಟು; ( ಆಸಾಮಿ ನೋಡಿ ಏಟಿನ ಜೋರು ) ಆ ಮೇಲೆ ಪೆಪ್ಪರ್‌ಮೆಂಟು. ಆಳುವ ಅರಸ ಸರಸಿಯಾದರೆ ದುಃಖವೂ ಸುಖವೇ.

* * * *

ತಾತಯ್ಯನವರ ಮನೆಮಾತು ತೆಲುಗು. ಆದರೆ ಅವರಿಗೆ ಕನ್ನಡದ ಬಗ್ಗೆ ಬಹಳ ಆದರ. ಕನ್ನಡದಲ್ಲಿ ಅನೇಕ ಪುಸ್ತಕಗಳನ್ನು ಬರೆದರು.

ಕರ್ನಾಟಕ ಸಾಹಿತ್ಯ ಸಮ್ಮೇಳನಕ್ಕೆ ಅಧ್ಯಕ್ಷರಾಗಿದ್ದರು. ಉಪ್ಪುಂಡ ನಾಡಿಗೆ ಉರಲಾಗುವದು ಉತ್ತರ ಕರ್ನಾಟಕದ ಮರಾಠರಿಗೇ ಸಂದ ವೈಶಿಷ್ಟ್ಯ. ತಿಳಿಯಬೇಕಾದರೂ ಹೇಗೆ ತಾತಯ್ಯನವರಿಗೆ ಈ ದುರಭಿಮಾನದ ತತ್ತ್ವ!

* * * *

ತಾತಯ್ಯನವರ ಗುಣ ಹೇಗೋ ಅವರ ದೇಹವೂ ಹಾಗೇ ಉನ್ನತವಾದುದು. ಬರಬಾರದ ತೊಂದರೆ, ವಿಪತ್ತುಗಳು ಬಂದರೂ ಅವರ ಉನ್ನತ ಗುಣವು ದಣಿದಿಲ್ಲ. ಹೊರಲಾರದ ಮುಪ್ಪು ಬಂದರೂ ಅವರ ಮೈ ಮಣಿದಿಲ್ಲ. ಅವರ ಸರಳ ಜೀವನ, ನಿಯಮಿತವಾದ ಆಹಾರವಿಹಾರಗಳೂ ಸೇವಾನಿರತತೆಯೂ ಇದರ ಗುಟ್ಟೆಂದು ಅವರೇ ಹೇಳಿದ್ದಾರೆ.

ತಾತಯ್ಯನವರಿಗೆ ತೊಂಬತ್ತು ವರ್ಷ ಮುಗಿಯಿತು. ತಾಪತ್ರಯ ಮಾತ್ರ ಇನ್ನೂ ಬಿಟ್ಟಿಲ್ಲ. ಅನಾಥಾಲಯ— ಸಮಾಜಸೇವೆಗಳು ಅವರನ್ನು ಕೊನೆಯವರೆಗೂ ಬಿಡುವಂತೆ ಕಾಣುವದಿಲ್ಲ.

ತಾತಯ್ಯನವರು ನೂರು ವರ್ಷ ಬದುಕಿರಲಿ ಎಂದರೆ ತಪ್ಪಾಗಬಹುದು. ನಾನು ಹುಡುಗ; ಅವರು ಬಹಳ ಹಿರಿಯರು. ಆದರೂ ತಾತಯ್ಯನವರು ನೂರು ವರ್ಷ ಬದುಕಿರಲಿ ಎಂಬಾಸೆ ಇದೆ ಎಂದು ಹೇಳದಿರುವಂತಿಲ್ಲ.

# ಶ್ರೀ. ಟಿ. ಪಿ. ಕೈಲಾಸಂ

ಬೆಂಗಳೂರು ಮನೆವಾರ್ತೆಪೇಟೆ ಮೂಲೆಯಲ್ಲಿ, ಒಂದು ಮಹಡಿ ಮನೆ. ಅದಕ್ಕೊಂದು ಬಿಸಿಲು ಮಚ್ಚು ಬೀದಿಯಲ್ಲಿ ಓಡಾಡುವವರಿಗೆ ಮೇಲೆ ನಡೆಯುವುದೆಲ್ಲಾ ಕಾಣುತ್ತೆ; ಕೇಳುತ್ತೆ.

ಎಂಟು ಹತ್ತು ವರ್ಷಗಳ ಹಿಂದೆ ಬೇಸಗೆ ಕಾಲ. ಸಂಜೆ ೭ ಗಂಟೆ ಹೊತ್ತು. ಎಲೆಕ್ಟ್ರಿಕ್ ದೀಪದ ಬೆಳಕಿನಲ್ಲಿ ಆ ಮಚ್ಚಿನ ಮೇಲೆ ಹತ್ತು ಹದಿನೈದು ಜನ ಗುಂಪಾಗಿ ನಿಂತು, ಸಿಗರೇಟು ಸೇದುತ್ತಿದ್ದರು. ಎಲ್ಲಾ ಮೈಸೂರು ಜರತಾರಿ ರುಮಾಲೇ– 'ಶತಮಾನ'ದ ಜನ. 'ಶತಮಾನ'ದ ಜನ ಎಂದರೆ Century club ನವರು ಅಂದ ಹಾಗೆ. ನೂರು ರೂಪಾಯಿಗೆ ಏರಿದ ಸಂಬಳದವರು.

ಇವರ ನಡುವೆ.... ಮೊದಲೇ ಗೂನು ಬೆನ್ನು. ಇನ್ನೂ ಸ್ವಲ್ಪ ಬಲಗಡೆ ಬಾಗಿ ಗಬಗಬ ಮಾತಾಡುತ್ತಿತ್ತು, ಒಂದು ವ್ಯಕ್ತಿ. ಮಾತಿಗಿಂತ ಧ್ವನಿಯೇ ಬಹಳ. ಮುಖ.... ವಿಚಿತ್ರ. ಮಾಡುತ್ತಿದ್ದ ವಿಕಾರಗಳಿಂದ ಮತ್ತಷ್ಟು ವಿಚಿತ್ರ. ಸೇರಿದ್ದವರೆಲ್ಲ ಗಟ್ಟಿಯಾಗಿ ನಗುತ್ತಲೇ ಇದ್ದರು. ಡಾರ್ವಿನ್ ತತ್ತ್ವದ ನಾಟಕ–ಸಾಭಿನಯ ತರ್ಕ– ಗೋವಿಂಡನ ಗೋತ್ರ ಗೋರಿಲ್ಲಾನದು, ಎಂಬ ಗಹನ ಸಿದ್ಧಾಂತ.... ಇರಬಹುದು ಅಂತ ಮೇಲೆ ಹೋದೆ.

ನಡುವೆ ನಿಂತಿದ್ದದ್ದು, ಕೈಲಾಸಂ. ನಡೆಯುತ್ತಿದ್ದದ್ದು ಅಭಿನಯ ವಲ್ಲ; ಸಾದಾ ಮಾತು.

ಸಿಗರೇಟಿನ ಹೊಗೆ ಮತ್ತೆ ಮೊದಲು. ಇದ್ದಕ್ಕಿದ್ದ ಹಾಗೆ 'Karmarthi' ನಾಟಕ ಮೊದಲಾಯ್ತು. ಅಂದರೆ ಇಪ್ಪತ್ತೆಂಟು ಇನ್‌ಫರೆನ್ಸು ಮಾಡಬೇಡಿ. ನಟರು ಬೇರೆ ಬೇಕಿಲ್ಲ 'ಭೂಪತಿ'ಗೆ. ಸರ್ವತಂತ್ರ ಸ್ವತಂತ್ರ. 'ಅಪ್ ಟು ಡೇಟ್ ಅಮ್ಮಯ್ಯ'ನೂ ಅವನೇ, ನೋ ಥೆಂಜರ್ 'ನಾಗೂ' ನೂ ಅವನೇ. ಕಂಡಕ್ಟ್ರು, ಕವಿ, ಎಲ್ಲಾ ಕಲಸುಮೇಲೋಗರ. ಹಿಂದಿನ ರಾತ್ರಿ ಬರೆದಿದ್ದ ಮೊದಲನೆ ದೃಶ್ಯ. ಅಲ್ಲ; ಮನಸ್ಸಿನಲ್ಲಿ ಮೂಡಿದ್ದದ್ದು. ಬರೆಯೋದಂದರೆ ಗೊತ್ತೇ ಇಲ್ಲ 'ಭೂಪತಿ'ಗೆ. ಹುಡುಗ ನಾಗಿರಬೇಕಾದರೆ ಮೇಷ್ಟ್ರಿಗೇ ಮಣ್ಣು ಮುಕ್ಕಿಸಿದ ಮೂರ್ತಿ. ಕಡೆಗೆ ಕಾಗದ ಪತ್ರ ಬರೆಯೋ ಗ್ರಹಚಾರವೂ ಇಲ್ಲ.

ಕರ್ಮಾರ್ಥಿ ನಾಟಕದಲ್ಲಿ....ಭೀಷ್ಮರನ್ನು ಏನೆಂದು ಸಂಬೋಧಿಸಬೇಕು ದ್ರೋಣರು? ಅವರಿಗಿಂತ ಇವರು ವಯೋವೃದ್ಧರು; ಜ್ಞಾನವೃದ್ಧರು. ನಮಸ್ಕಾರ ಅಂದರೆ ತಾವು ಬ್ರಾಹ್ಮಣರು, ಇವರು ಕ್ಷತ್ರಿಯರು. ಆಶೀರ್ವಾದ ಮಾಡೋಣವೇ, ತ್ರಾಣ ಸಾಲದು. ಎಲ್ಲಾ ತೊಡಕು, 'ತಕ್ಲೀಫು'. ಮೂರು ಮಧ್ಯಾಹ್ನ ಆದವು. ಮೂವತ್ತು ಸಿಗರೇಟುಪ್ಯಾಕು ಸುಟ್ಟು ಹೋದವು. ಕಡೆಗೆ ಅರ್ಧರಾತ್ರಿಯಲ್ಲಿ ಆರಾಣೆ ನಾವೆಲು ಆರಂಭಿಸಿದ್ದಾಗ ಬಂತು ಅದು. Salutations Gangeya !– ಹೀಗೆ ಮಾತು ಮಾತಿನ ಔಚಿತ್ಯದ ಮಾಹಿತಿಯೆಷ್ಟೋ ಮಹನೀಯನಿಗೆ ನಾಟಕದ ಬಗ್ಗೆ.

ಭೂಪತಿ ಅಂದೆನಲ್ಲ. ಹಾಗಂದರೆ ಸಾಕು ಕೈಲಾಸಂ ಸಮ್ಮವ. ಆದರೆ ಅವನ ಮಾತಿಗೆ ನಗದಿದ್ದರೆ ಬಂತು ಆವೇಶ; ಮಾತು ಸುರಿಮಳೆ. ತಡೆಯಿಲ್ಲ, ಕಡೆಯಿಲ್ಲ. ನಗದವನೂ ನಕ್ಕ, ನಕ್ಕವನು ಅತ್ತ. ಅಂದರೆ ನಗೆಯಲ್ಲಿ ಹೊಗೆ ಬಹಳ. Ibsen ನದು ಇನಿಮಾತು, Galsworthy ದು ಗೆಳೆಮಾತು, Shaw ನದು ಸುಡೋ ಮಾತು, ಕೈಲಾಸಂದು ಕೊಡಲಿ ಪೆಟ್ಟು– ಇದು ಅವನದೇ ಅಭಿಪ್ರಾಯ.

* * * *

ಬೆಂಗಳೂರು ಅಮೇಚೂರು ಕ್ಲಬ್ಬಿನವರು, ಪ್ರಹಸನಗಳದೊಂದು ಸ್ಪರ್ಧೆ ನಡೆಸಿದರು ೧೯೧೯ರಲ್ಲಿ. 'ಜೊಳ್ಳುಗಟ್ಟಿ'ಯ 'ಗುಂಡೂ' ರಾಯನಿಗೆ

ಮೊದಲನೆ ಬಹುಮಾನ ಬಂತು. ಬರೀ ಹರಟೆಯು ಟೊಳ್ಳು ಕೈ-ಕೈ ಅನ್ನೋದು ಕೈಲಾಸಂ-ದ ತದ್ಭವ, Diminutive – ಗಟ್ಟಿ ಗುಂಡೂರಾಯನಾದ. ಬೆಂಗಳೂರು ಬೀದೀಲೆಲ್ಲ 'ಬಣ್ಣದ ಬೀಸಣಿಗೆ' ಸಾತೂಪಾತೂನ ಸುದ್ದೀನೇ. ಫೇಲಾದ ಫಟಿಂಗರ ಮೇಲೆ ಸಿಟ್ಟು ಮಾಡೋವಾಗೆಲ್ಲ ಮಾಧೂನ ನೆನಪೇ ಮಾತಾಪಿತೃಗಳಿಗೆ.

ಕೇಳೋರಿದ್ದರೆ ' ಕಿರಿಚಿಕೊಳ್ಳೋದಕ್ಕೆ ' ಕಡಿಯೇ ಇಲ್ಲ ಕೈಗೆ: ಆಡುವವರು ಆದರೆ ಅಂತ್ಯವೇ ಇಲ್ಲ ನಾಟಕಗಳಿಗೆ. ಕನ್ನಡ, ಇಂಗ್ಲಿಷು ಎಲ್ಲಾ ೩೫-೪೦ ನಾಟಕ ಇವನದು. Shakespere,Shaw ರು ಸಹಿತ ಸೋತು ಹೋದರು Seven and Twenty ಗೆ. ಆದರೇನು, ಎಲ್ಲಾ ಅಮುದ್ರಿತ ಗ್ರಂಥ ರಾಶಿ. ಆರೋ ಏಳೋ ಅಪ್ಪಿ ತಪ್ಪಿ ಅಚ್ಚಾದವು. ಉಳಿದವನ್ನು ಅಚ್ಚು ಹಾಕೋ ಧೈರ್ಯ ಅನುಭವವಿಲ್ಲದವರಿಗೇ ಬರಬೇಕು, ಬಂದರೆ. ಒತ್ತಕ್ಷರಗಳ ಒದ್ದಾಟ, ಓದುವವರಿಗೆ ಬಹಳ ಬೇಸರ.

ಬಳ್ಳಾರಿಯವರ ತೆಲಗು ನಾಟಕವಾದರೆ 'ಆಂಧ್ರ ನಾಟಕ ಪಿತಾಮಹ'ನನ್ನು ನುತಿಸಿ, ನಾಂದೀಪದ್ಯ ನುಡಿದು, ಗ್ರಂಥಕರ್ತರ ಗೊಂಬೆಗೆ ಹೂವಿನ ಹಾರ ಹಾಕೋದು ಕ್ಲಬ್ಬಿನವರ Custommoo. ಕಂಡು ಕಿಡಿಯಾದ ಕೈ. ತನ್ನ ತಸ್ವೀರಿಗೆ ತಾನೇ ತೊಡಿಸಿದ ತೋರಣ. ನನಗೆ ನಾನೇ ನಮೋ ಎಂದು, 'ಕರ್ನಾಟಕ ಪ್ರಹಸನ ಪ್ರಪಿತಾಮಹ'ನಾದ. ಅದೆಲ್ಲಾ ಜಂಬವಲ್ಲ; ಜಂಬಗಾರರ ಪ್ರತಿಬಿಂಬ. ಜಂಬ ಸೇರದು ಇವನಿಗೆ. ಆದರೆ ಜಂಬದ ಕೋಳಿಗಳಿಗೆ ಮಾತ್ರ ಸಂಬಿದ ಬೆಕ್ಕು. ಇದೇ ಇವನ ನಗೆಯಹೊಗೆ– ಕೊಡಲಿ.

ಏನು ಬೇಕು ನಿಮಗೆ ? Photography ಯಿಂದ Philosophyಯ ವರೆಗೆ, ಅಂಗಸಾಧನೆಯಿಂದ ರಂಗಭೂಮಿಯ ವರೆಗೆ– ಕೈಲಾಸಂನ ಕೈಯಿದೆ. ವಿನೋದವಿದೆ; ವಿಕಟತನವಿಲ್ಲ. ವಿಮರ್ಶೆಯಿದೆ; ವಿರೋಧವಿಲ್ಲ. ಸಿಡುಕಿದೆ; ದುಡುಕಿಲ್ಲ. ವಿಲಾಯತಿಯಲ್ಲಿದ್ದಾಗ ಹಾಕೀ ಆಟದಲ್ಲಿ ಸುಪ್ರಸಿದ್ಧ ಗೋಲ್‌ಕೀಪರು; ಬೆಂಗಳೂರಲ್ಲಿದ್ದಾಗ ಫಿಜಿಕಲ್ ಕಲ್ಚರದ ಅಪ್ರಸಿದ್ಧ ಪ್ರೊಫೆಸರು. ನವೀನ ಸಾಹಿತ್ಯದಲ್ಲಿ ಆಚಾರ್ಯರಿಲ್ಲವೇ ನಾಲ್ಕು ಮಂದಿ? ಹಾಗೇ....ಅಭಿನಯದಲ್ಲಿ ಆಚಾರ್ಯ, ಕೈ....

ಆದಿಯೆಂದರೂ ಅಡ್ಡಿಯಿಲ್ಲ. Master of Techniquoo ಅತಿರಥಿ ಅರ್ಜುನ ಬಾಣ ಬಿಟ್ಟರೆ....ಕಾಲೂ ಕೈಯೂ ಕ್ರಮವಾಗಿರಬೇಕು.... ನಿಮಗೆ ಗೊತ್ತಿಲ್ಲವಷ್ಟೆ ಅದು.... ತಗೊಳ್ಳಿ ತೋರಿಸಿದ ತಲೆನೋವು ಬರೋ ವರೆಗೂ. ಅಲ್ಲಿಗೂ ತಿಳೀಲಿಲ್ವೆ?....ಥುತ್, ನಾಯಿಗಾಕಿದುಚ್ಛಿಷ್ಟಾನ್ನರಿಗ್ಯಾಕ !

× × × ×

ಭಾಷೆಗೆ ಕಟ್ಟುಬೇಡವೇ? ಭಾಷೆ ಬಲಿಹಾಕಿದನಲ್ಲ! ನಾಟಕ ಅಂದರೆ ಇದೇಯೋ! ನಕಲಿ ಮಾತಾಡಿದರೆ ಆಯ್ತೋ! ನಾನಾ ಮಾತು ಆಡಿದರು ನಾಕೂಜನ ಪಂಡಿತರು. ಬೈದರು, ರೇಗಿದರು. ತಣ್ಣಗಿದ್ದ ಮಹಾರಾಯ! ಮಂಗಳೂರಿನಲ್ಲಿ ಒಂದು ಸಾರಿ 'ಗುಂಡೂ'ರಾಯನ ಅಭಿನಯವಾಯ್ತು; ಹೋಲರೂಲು ! ನೋಡಿದವರೆಲ್ಲ ನೀರು ಸುರಿಸಿದರು ಕಣ್ಣಿಂದ. ಹಲ್ಲು ಕಡಿಯುತ್ತ ಬಂದು ಕೂತಿದ್ದ ಪಂಡಿತಶತ್ರುಗಳೊಬ್ಬರು ಅತ್ತುಬಿಟ್ಟರು ಕಡೆಕಡೆಗೆ. ಮನೆಗೆ ಹೋಗುತ್ತಾ ಅಂದರು. 'ಭಾಷೆ ತಲೆ ಬೋ–, ಭಾವ ನೋಡಬಾರದೆ, ಭಾವ!'

ನಾಟಕ ಅಂದರೆ ನೀತಿ ಬೇಡವೇ, ಉದ್ದೇಶ, ಬೇಡವೇ? ಇದೇನು ಪೋಲಿ ನಾಟಕ? ಅಂತ ಕೆಲವರು ಕಲೋಪಾಸಕರು ಕೆರಳಿದರು. ಮಲ್ಲಿಗೆ ಹೂವಿಗೆ ಘಮಘಮಿಸೋದರಲ್ಲಿ ಏನು ಉದ್ದೇಶ? ಏನು ನೀತಿ? ಅಂತಃಕರಣವನ್ನು ಅಲುಗಾಡಿಸೋದು ನನ್ನ ಕೆಲಸ. ನನ್ನ ನಾಟಕ ಪೀಠಿಕೆಯಿಲ್ಲ, ಪ್ರಸ್ತಾವನೆಯಿಲ್ಲ; ನನ್ನ ನಾಟಕವೇ ಅಲ್ಲ – ನಿಮ್ಮದೇ ಇದು. ನೋಡಬಾರದೆ–,ನಿಮ್ಮ ಮನೆ, ನಿಮ್ಮ ಸಂಸಾರ, ನಿಮ್ಮ ಭಾಗೀರ್ತಮ್ಮ, ನಿಮ್ಮದೇ, ನೋಡಿಕೊಳ್ಳಿ– ಎಂತ ಗುಂಡೂರಾಯನ ಸವಾಲು.

ಬಹಳ ನಾಟಕ ಬರೆದರೆ, ಎಲ್ಲಾ ನಾಟಕದಲ್ಲೂ ಬಂದ ಪಾತ್ರಗಳೇ ತಿರುಗಾ ಮುರಗಾ ಬೇರೆಬೇರೆ ಹೆಸರು, ಬೇರೆಬೇರೆ ವೇಷದಿಂದ ಬಂದುಬಿಡುತ್ತಾರೆ; ವರ್ಸಟೈಲ್ ಕಮೆಡಿಯನ್ನನ ನಕಲಿಯಿದ್ದಂತೆ; ಶ್ರೀರಂಗನ 'ಲೆಕ್ಚರ್'ಗಳಿದ್ದಂತೆ, ಕೈಲಾಸಂನ ಮಾಧು, ಕಿಟ್ಟಿ, ಬಾಗೀರಥಮ್ಮ, ನರಸಿಹ್ಮಯ್ಯ, ಸಾತು, ಪಾತು,– ಎಲ್ಲಾ ಬೇರೆಬೇರೆ ಜನ. ಒಂದೇ ಮನೆಯವರು, ಒಂದೇ ಸಂಪ್ರದಾಯ; ಆದರೆ ಪ್ರತಿಯೊಬ್ಬರೂ ಬೇರೆ

ಬೇರೆ ಜೀವಂತ ಜನ. ಇದೇ ಕೈಲಾಸಂನ ನಾಟಕದ ಜೀವಾಳ.ತಸ್ಬೀರು-ಫ಼ೋಸೋಗಳ ವ್ಯವಹಾರ.

ಬರೀ ನಾಟಕವಲ್ಲ. ಕವಿತಾಲೋಕದಲ್ಲೂ ಕಾಲಿಟ್ಟಿದ್ದಾನೆ ಕೈ. ಆದರೆ ಎಲ್ಲಾ ಇಂಗ್ಲೀಷಿನಲ್ಲಿವೆ. ನಮ್ಮ ಜನರಿಗೆ ಅದರ ಸವಿ ಸಿಗೋ ಹಾಗಿಲ್ಲ. Lake, Kaikayee, Naked Truth ಮುಂತಾದವು ಕೇಳಿದ ವರ ಕರುಳನ್ನು ಕೆಲವು ಸಾರೆ ಕರಗಿಸಿವೆ.

* * * *

ತೋಳಿಲ್ಲದ ಬನೀನು. ಒಮ್ಮೊಮ್ಮೆ ನೀಲಿ ಅಂಗಿ. ತೀರಿತು ವೇಷದ ಆಡಂಬರ. ಊಟ; ಇದ್ದರೆ ಆಯ್ತು, ಇಲ್ಲದಿದ್ದರೆ ಇಲ್ಲ. ದಿನಕ್ಕೆ ಹತ್ತು ಪೆಟ್ಟಿಗೆ ಸಿಗರೇಟು, ಹತ್ತು ಲೋಟ ಕಾಫಿ. ಸೇದಿ ಬಿಸಾಡಿದ ತುಂಡು ಗಳಾದರೂ ಸರಿ, ಮೂರು ದಿನದ ಕಾಫಿಯಾದರೂ ಸರಿ. ರೀತಿ ಬಹಳ ಸರಳ. ಚಾಮರಾಜಪೇಟೆಯಲ್ಲಿ ಇವರ ಬಂಗಲೆ ದೊಡ್ಡದು. ಇವನಿಗೆ ಮಾತ್ರ ಕುದುರೆ ಲಾಯದ ಮಗ್ಗುಲಿನ ಮೂಲೆಕೋಣೆ. ಕೋಣೆಯಲ್ಲಿ ಕಸ ಕಲ್ಪಾಂತದ್ದಾದರೂ ಅಡ್ಡಿಯಿಲ್ಲ.

ಕೈಲಾಸಂನ ತಾಯಿನುಡಿ ತಮಿಳು. ಆದರೆ ನಾತೂ ಪಾತೂನ ಕನ್ನಡ 'ಕೇವಲ ಕನ್ನಡ'- ಅವನ ವಿದ್ಯೆ ಸೈನ್ಸು, ಜಿಯಾಲಜಿ. ಆದರೆ ಆಯುಷ್ಯವೆಲ್ಲ ಸಾಹಿತ್ಯದಲ್ಲಿ. ಮಿಂಚಿನಂತೆ ಮೆರೆದು ಮಾಯವಾದರೂ ಮೂಡಿದ ನಾತು ಮರೆಯೋದು ಅವರ ಮನೆತನದಲ್ಲೇ ಇಲ್ಲ. ಅಂದರೆ, ಮೂರು ಮೂರು ವರ್ಷ ಮನೆಯನ್ನೇ ಮರೆಯೋ ಮರಗೂಳಿ. ಸಿಗರೇ ಟಿಲ್ಲದೆ ನಾಗೋದಿಲ್ಲ ಒಂದು ಸೆಕೆಂಡಾದರೂ, ಅಂದರೆ, ಸನ್ಯಾಸಿಯಾಗಿ ಸಾವಿರ ವರ್ಷ ನಾಗುತ್ತೇನೆ ಅನ್ನೋ ಸಾಹಸಿ.

ಅದೊಂದು ಅರಿಯಲಾರದ ಸ್ವಭಾವ. 'ಜಲಹುತಭುಕ್‌ನ್ಯಾಯ', 'ಕರಗುವ ಕಬ್ಬಿಣ', ವಿರೋಧಗಳ ಒಗಟು. ಬೆಂಕಿಯಂಥ ಮಾತು; ಕೊಡಲಿಪೆಟ್ಟಿನ ಹಾಗೆ; ಎಂದು ಅವನ ಟೀಕೆಗೆ ಹೆದರಿ ಹತ್ತಿರ ಹೋದ ವರು, " ಅಯ್ಯೋ, ಬೆಣ್ಣೆಯಂಥ ಸ್ವಭಾವ; ಏನು ಮೆತ್ತನೆ ಮನಸ್ಸು" ಅಂತ ಹಿಂದಿರುಗಿದ್ದಾರೆ. ಬಹಳ ಬುದ್ಧಿವಂತ, ವಿದ್ಯಾವಂತ; ಅಂತ ಮಾತಾಡಿಸಿದವರು, " ಇದೇನು, ಹುಚ್ಚನ ಹಾಗೆ " ಅಂದರು.

"ಒಳ್ಳೇಸಕಲಿ, ಹೊತ್ತು ಸುಖವಾಗಿ ಹೋಗುತ್ತೆ" ಅಂತ ಹೋದವರು ಮೂಗಿನ ಮೇಲೆ ಬೆರಳಿಟ್ಟು, "ಏನು ವೇದಾಂತ, ಆಸಾಮಿ, ಪರವಾ ಇಲ್ಲ" ಅಂದರು. ಅದರ ಪರವೆಯೇ ಇಲ್ಲ 'ಭೂಪತಿ'ಗೆ. ಹೊಗಳಿದರೆ ಮೂಸಲಿಂದ ಹೊರಗೇ ಹಾದಿ ತೋರಿಸುತ್ತಾನೆ. ಬೈದರೆ ಬಾಗಿಲು ತೆರೆದು ಬರಮಾಡಿಕೊಳ್ಳುತ್ತಾನೆ. ಅದೊಂದು ವಿಚಿತ್ರ ಜೀವ, ಸ್ವತಂತ್ರ ಜೀವ. ನೇಮವೆಂಬುದು ನಿಲ್ (Nil) ಹಾದಿ, ಹೋದದ್ದೇ.

ಈಗ ಉತ್ತರ ಕರ್ನಾಟಕದಲ್ಲಿ ಇವರ ಸಂಚಾರ ಬಹಳವಂತೆ. ಇದರ ಉದ್ದೇಶ ನಿರುದ್ದೇಶ. ಆದರೆ, ಮೈಸೂರು ಮನೆಮಾತು, ಮೈಸೂರಿನ ಬಾಳು ಬದುಕು, ಹೃದಯ, ಬುದ್ಧಿ- ಉತ್ತರಕರ್ನಾಟಕದವರಿಗೆ ಹೆಚ್ಚು ಹೆಚ್ಚು ಅರ್ಥವಾಗುವುದು ಅದರ ಫಲ. ಅವನ ನಾಟಕದಲ್ಲಿನ ನೀತಿಯಿದ್ದಂತೆ. ಪ್ರಾಸಂಗಿಕ ಫಲ. ಮೂಲೋದ್ದೇಶವಲ್ಲ.

ಈ ತಿರುಗಲ್ತಿಪ್ಪಣ್ಣ ಸ್ಥಿರವಾಗಿ ನಿಂತ್ರೆ—ತಲೆಯೊಳಗಿನ ಥಾಟ್ ಹೊರಗೆ ಬಂತು. ಹತ್ತರ ಇದ್ದವರು ಎಚ್ಚರಿಸಿದರು. "ನಾಗತ್ತೆಗೆ ಮೀಸೆ ಬಂದ್ರೆ ನಾವೂ ಚಿಕ್ಕಪ್ಪಾ ಅಂತ ಕರೆಯಬಹುದು" ....ಸುಮ್ಮನಾದೆ.

# ಕೀ. ಶೇ. ರೊದ್ದರಾಯರು

ಕಳೆದ ತಿಂಗಳು ಶಾಂತೇಶ ವಾಚನಾಲಯದಲ್ಲಿ ಕರ್ನಾಟಕ ಪಿತಾಮಹ ಶ್ರೀ. ದಿವಾನ ಬಹಾದ್ದೂರ ರೊದ್ದರಾಯರ ಭಾವಚಿತ್ರದ ಅನಾವರಣವಾಯಿತು. ವಾಚನಾಲಯದವರು ತಮ್ಮ 'ಮಳಲು ಸೇವೆ' ಮಾಡಿದರು. ಆದರೆ, ಶಾಶ್ವತವಾದ ಭವ್ಯ ಸ್ಮಾರಕವೊಂದು ಕರ್ನಾಟಕದಲ್ಲಿ ಅವರ ಹೆಸರಿನಲ್ಲಿ ಸ್ಥಾಪಿತವಾಗದಿರುವದು ದೊಡ್ಡ ಕೊರತೆಯೆಂದು ಹೇಳೇಬೇಕಾಗಿಲ್ಲ.

ರೊದ್ದರಾಯರು ಇಡೀ ಕರ್ನಾಟಕದಲ್ಲಿ ಎಲ್ಲರ ಮನೆಯನ್ನು ಇನ್ನೂ ಹೊಕ್ಕಿಲ್ಲ. ಮೈಸೂರು, ಮಂಗಳೂರಿನ ಕಡೆ ಇವರ ಹೆಸರು ಕೆಲವರಿಗೆ ತಿಳಿಯದಿರಬಹುದು. ಆದರೆ ಉತ್ತರ ಕರ್ನಾಟಕದಲ್ಲಿ ಇವರನ್ನು ಅರಿಯದವರೇ ಇಲ್ಲ. ಇವರ ಆಶ್ರಯ, ಪ್ರೋತ್ಸಾಹಗಳನ್ನು ಒಂದಿಲ್ಲೊಂದು ರೀತಿಯಲ್ಲಿ ಪಡೆಯದವರು ಕಡಮೆ. ಇವರ ಸ್ವಭಾವ ಅಷ್ಟು ಸರಳ. ಹತ್ತಿರ ಬಂದವರಿಗೆಲ್ಲ ತಮ್ಮ ಆಪ್ತರು ಇವರು, ಒಳಗದವರು ಎನಿಸುತ್ತಿತ್ತು. ಇವರು ಮನಸು ಬಿಚ್ಚಿ ಆಡುತ್ತಿದ್ದ ಮಾತು ಅಂಥದು. ೨೪ ತಾಸೂ ಆರ್ತರಿಗೆ, ಬಡವರಿಗೆ, ಎಲ್ಲರಿಗೆ ಇವರದು ಮುಕ್ತದ್ವಾರ; ಬಳಿಗೆ ಬಂದವರು ಜೋಲು ಮೋರೆಯಿಂದ ಹಿಂದಿರುಗಿದುದೇ ಇಲ್ಲ. ಎಂಥ ಸಹಾಯವೂ ಇವರ ಮನಸಿಗೆ ಮೀರಿರಲಿಲ್ಲ. ವಿದ್ಯಾರ್ಥಿಗಳಿಗಂತೂ ಇವರು ಅಲಭ್ಯ ದೇವತಾ ಸ್ವರೂಪ.

ಅವರ ವಿದ್ಯಾಪ್ರೇಮ ಅಷ್ಟು ಬಲವಾದುದೆಂತಲೆ ಕರ್ನಾಟಕ ಕಾಲೇಜು ಧಾರವಾಡದಲ್ಲಿ ಸ್ಥಾಪಿತವಾಯಿತು. ಹಳ್ಳಿಹಳ್ಳಿ ತಿರುಗಿ ಒಂದು ಲಕ್ಷ ರೂಪಾಯಿ ಕೂಡಿಸಿದರು ಅದಕ್ಕಾಗಿ. ಕಾಲೇಜು ಮೊದಲಾದ ಮೇಲೆ ತಾವಿರುವ ವರೆಗೆ ಕಾಲೇಜಿನ ಬಗ್ಗೆ ಇವರ ಆಸ್ಥೆ, ಮಗುವಿನ ಮೇಲೆ ತಂದೆ ತೋರಿಸುವಂಥದು. He was a professor without a portfolio ಎಂದು ಕಾಲೇಜದ ಪ್ರೊಫೆಸರರೊಬ್ಬರು ಹೇಳಿದ್ದರು. ಅವರಿಲ್ಲದೆ ಕಾಲೇಜಿನ ಯಾವ ಕೆಲಸವೂ ಪೂರ್ಣವಾಗುತ್ತಿದ್ದಿಲ್ಲ.

ಕೆಲವು ದಿನ ಇವರು ಶಾಲಾ ಇನ್ಸ್‌ಪೆಕ್ಟರರಾಗಿದ್ದರು. ಆಗ ಧಾರವಾಡ ಜಿಲ್ಲೆಯಲ್ಲಿ ಇದ್ದ ಶಾಲೆಗಳು ೧೬೭. ಇವರ ಕಾಲದಲ್ಲಿ ೭೧೩ ಆದವು. ರಾಯರು ಬಹಳಕಾಲ ಟ್ರೇನಿಂಗ ಕಾಲೇಜದ ಅಧ್ಯಕ್ಷರಿದ್ದರು. ಈ ಪ್ರಾಂತದಲ್ಲಿ ಆಗ ವಿದ್ಯೆಗೆ ಸಿಕ್ಕಷ್ಟು ಪ್ರೋತ್ಸಾಹ ಹಿಂದೆ ಎಂದೂ ಇಲ್ಲ. ಕಾಲೇಜದ ವಿದ್ಯಾರ್ಥಿಗಳಿಗೆ ಇವರ ಮೇಲಿದ್ದ ಪ್ರೇಮ ವಿಶ್ವಾಸಗಳು ಬರೆಯುವ ಹಿಡಿತಕ್ಕೆ ಸಿಗುವದಿಲ್ಲವೆಂದರೆ ಯಾರೂ ನಂಬಲಾರರು. ಆದರೆ ಅವರು ಕಾಲೇಜು ಬಿಟ್ಟ ಮೇಲೂ ಅಲ್ಲಿ ಇವರ ಸ್ಥಾನವು ಇವರದೇ ಇತ್ತು. ಯಾರಿಗೂ ಅದು ಸಿಗುವಂತಿರಲಿಲ್ಲ. ಕಾಲೇಜಿನಿಂದ ನಿವೃತ್ತರಾದ ಬಹಳ ದಿನಗಳ ಮೇಲೆ, ಒಮ್ಮೆ ಧಾರವಾಡದಲ್ಲಿ ಊರ ಹೊರಗೆ ಇದ್ದ ಹುಲ್ಲು ಬಣವೆಗಳ ಗುಂಪಿಗೆ ಬೆಂಕಿ ಬಿತ್ತು. ರಾಯರಿಗೆ ಸುದ್ದಿ ತಿಳಿಯಿತು. ಕೂಡಲೆ ಅಲ್ಲಿ ಸಿದ್ಧರಾದರು. ಕಾಲೇಜದ ವಿದ್ಯಾರ್ಥಿಗಳಿಗೆ ಬರಬೇಕೆಂದು ಸುದ್ದಿ ಹೋಯಿತು. ಗುಂಪಿಗೆ ಗುಂಪೇ—೭೦೦ ಮಂದಿ— ಬಂದು ನಿಂತರು. ತಾಸಿನೊಳಗಾಗಿ ಮಗ್ಗುಲಲ್ಲಿದ್ದ ಹುಲ್ಲು ಬಣವೆಗಳು ದೂರ ಸರಿದಿದ್ದವು. ಬೆಂಕಿ ಆರಿತ್ತು. ಅಲ್ಲಿಂದ ರಾಯರ ಮನೆಗೆ ಇಡೀ ತಂಡವೇ ಹೋಯಿತು. ಒಲೆಯ ಮೇಲೆ ಹಂಡೆಗಳಲ್ಲಿ ತಯಾರಾಗಿತ್ತು, ಚಹಾ. ರಾತ್ರಿ ೧೨ ಗಂಟೆಗೆ ಕಾಲೇಜಿನ ತನಕ ಹೋಗಿ ಎಲ್ಲರನ್ನು ಬಿಟ್ಟು ಬಂದರು.

ರಾಯರದು ಅಸದೃಶ ಜ್ಞಾಪಕಶಕ್ತಿ. ಜನರ ಬಗ್ಗೆ ಬಹಳ ಅಭಿಮಾನ. ಧಾರವಾಡದಲ್ಲಿ ಇವರನ್ನರಿಯದವರಿರಲಿಲ್ಲವೆಂದೇನಲ್ಲ. ಇವರಿಗೆ ತಿಳಿಯದವರೂ ಯಾರೂ ಇರಲಿಲ್ಲ. ಎಲ್ಲರ ತಂದೆ ತಾತಂದಿರ, ಇಡೀ

ವಂಶಾವಳಿಯು ಚರಿತ್ರೆಯೂ ಇವರಿಗೆ ಗೊತ್ತು. ಯಾರಾದರೂ ಹುಡು ಗರು ಹತ್ತರ ಹೋದರೆ 'ಇಂಥವರ ಮೊಮ್ಮಗ, ಇಂಥವರ ಮಗ' ಎಂಬುದರ ಪುರಾಣ ಬಂದೇ ಬರಬೇಕು. ಒಮ್ಮೆ ಒಬ್ಬ ವಿದ್ಯಾರ್ಥಿ ವಿದ್ಯಾಭ್ಯಾಸಕ್ಕೆ ವಿಲಾಯತಿಗೆ ಹೋಗಬೇಕೆಂದು ಇವರ ಸಹಾಯ ಕ್ಕಾಗಿ ಹೋಗಿದ್ದ. 'ಇಂಥವರು ನಿಮ್ಮ ದೂರಿನ ಆಪ್ತರು, ಅವರನ್ನು ನೋಡು ಅವರಿಂದ ಸಹಾಯವಾಗಬಹುದು' ಎಂದರಂತೆ. ಅವರ ಹೆಸರೇ ಇವನಿಗೆ ತಿಳಿದಿರಲಿಲ್ಲ. ಮನೆಗೆ ಬಂದು ಕೇಳಿದಾಗ ಆ ಸಂಬಂಧ ತಿಳಿದು ಬಂತು. ಜನರು, ಅವರ ಕಷ್ಟಸುಖಗಳು, ಅವರ ಮನೆತನದ ಮಾತು ಗಳು– ಇವರಿಗೆ ತಿಳಿದಷ್ಟು ಆಯಾ ಜನರಿಗೇ ತಿಳಿದಿರಲಿಲ್ಲ.

ಇವರ ಮಾತೃಭಕ್ತಿಯು ಕಟ್ಟುಕತೆಯು ಜಾತಿಯದು. ತಾಯ ಮಾತು ಎಂದೂ ಮೀರುತ್ತಿದ್ದಿಲ್ಲ. ವಿದ್ಯಾರ್ಥಿಗಳಿಗೆ ಇದು ತಿಳಿದಿತ್ತು. ಪರೀಕ್ಷೆಯಲ್ಲಿ ನಾಪಾಸಾದರೆ ಇವರ ತಾಯಿಗೆ ಮೊರೆಯಿಟ್ಟರಾಯಿತು; ಪಾಸಾದಂತೆಯೇ. ಇವರ ಮಾತೃಭಕ್ತಿ ಎಷ್ಟೋ ಜನಕ್ಕೆ ಹೊಸ ಹುರುಪಿನದಾಗಿತ್ತು.

ಚಿಕ್ಕಂದಿನಲ್ಲಿ ಇವರಿಗೆ ಬಹಳ ಬಡತನ. ವಿದ್ಯಾಭ್ಯಾಸವೂ ಪೂರ್ಣ ವಾಗಿರಲಿಲ್ಲ. ಆದರಿಂದ, ದಿನಾ ಹತ್ತು ಮೈಲು ನಡೆಯುತ್ತಿದ್ದರು ನೌಕರಿ ಮಾಡಲಿಕ್ಕೆ. ಹುಬ್ಬಳ್ಳಿಯಲ್ಲಿ ಮಾಸ್ತರ ಕೆಲಸ. ಇರುವದು ಮದಿಹಾಳ. ಎಣ್ಣೆಗೆ ಗತಿಯಿಲ್ಲದೆ ಬೀದಿಯ ದೀಪದ ಬೆಳಕಿನಲ್ಲಿ ಓದಿ ದರು. ಆ ಅನುಭವವೇ ಇವರ ಎಲ್ಲ ಗುಣಗಳ ತಾಯಿ. ಅದೇ ಇವರ ಜೀವನವನ್ನರಳಿಸಿತು. ಅವರ ಮಹಾ ಆತ್ಮದ ಕೀಲು ಇದು. ಅದೆ, ಆ ಅಗಾಧ ಕರ್ತೃತ್ವಶಕ್ತಿ ಅಪಾರ ಪ್ರೇಮ ಕರುಣಗಳ ಮೇಳನ.

ಅಧಿಕಾರದಿಂದ ನಿವೃತ್ತರಾದ ಮೇಲೆ ರಾಜಕೀಯ ಸಾಮಾಜಿಕ ರಂಗದಲ್ಲಿ ಕಾಲಿಟ್ಟರು. ಕಾಯದೇಮಂಡಲ, ಜಿಲ್ಲಾ ಬೋರ್ಡುಗಳಲ್ಲಿ ಬಹಳ ದಿನ ಕೆಲಸ ಮಾಡಿದರು. ಕರ್ನಾಟಕ ಸಾಹಿತ್ಯಪರಿಷತ್ಸಮ್ಮೇಳನ, ಏಕೀಕರಣ ಪರಿಷತ್ತುಗಳಿಗೆ ಅಧ್ಯಕ್ಷರಾಗಿದ್ದರು.

ಕನ್ನಡಭಾಷೆಯ ಬೆಳವಣಿಗೆಗೆ– ಕನ್ನಡ ಅಭ್ಯಾಸದ ಪ್ರಚಾರಕ್ಕೆ

# ಕೀ. ಶೇ. ರೊದ್ದರಾಯರು

ಕಳೆದ ತಿಂಗಳು ಶಾಂತೇಶ ವಾಚನಾಲಯದಲ್ಲಿ ಕರ್ನಾಟಕ ಪಿತಾಮಹ ಶ್ರೀ. ದಿವಾನ ಬಹಾದ್ದೂರ ರೊದ್ದರಾಯರ ಭಾವಚಿತ್ರದ ಅನಾವರಣವಾಯಿತು. ವಾಚನಾಲಯದವರು ತಮ್ಮ 'ಮುಳಲು ಸೇವೆ' ಮಾಡಿದರು. ಆದರೆ, ಶಾಶ್ವತವಾದ ಭವ್ಯ ಸ್ಮಾರಕವೊಂದು ಕರ್ನಾಟಕ ದಲ್ಲಿ ಅವರ ಹೆಸರಿನಲ್ಲಿ ಸ್ಥಾಪಿತವಾಗದಿರುವದು ದೊಡ್ಡ ಕೊರತೆಯೆಂದು ಹೇಳಲೇಬೇಕಾಗಿಲ್ಲ.

ರೊದ್ದರಾಯರು ಇಡೀ ಕರ್ನಾಟಕದಲ್ಲಿ ಎಲ್ಲರ ಮನೆಯನ್ನು ಇನ್ನೂ ಹೊಕ್ಕಿಲ್ಲ. ಮೈಸೂರು, ಮಂಗಳೂರಿನ ಕಡೆ ಇವರ ಹೆಸರು ಕೆಲವರಿಗೆ ತಿಳಿಯದಿರಬಹುದು. ಆದರೆ ಉತ್ತರ ಕರ್ನಾಟಕದಲ್ಲಿ ಇವ ರನ್ನು ಅರಿಯದವರೇ ಇಲ್ಲ. ಇವರ ಆಶ್ರಯ, ಪ್ರೋತ್ಸಾಹನಗಳನ್ನು ಒಂದಿಲ್ಲೊಂದು ರೀತಿಯಲ್ಲಿ ಪಡೆಯದವರು ಕಡಮೆ. ಇವರ ಸ್ವಭಾವ ಅಷ್ಟು ಸರಳ. ಹತ್ತಿರ ಬಂದವರಿಗೆಲ್ಲ ತಮ್ಮ ಆಪ್ತರು ಇವರು, ಬಳಗ ದವರು ಎನಿಸುತ್ತಿತ್ತು. ಇವರು ಮನಸು ಬಿಚ್ಚಿ ಆಡುತ್ತಿದ್ದ ಮಾತು ಅಂಥದು. ೨೪ ತಾಸೂ ಆರ್ತರಿಗೆ, ಬಡವರಿಗೆ, ಎಲ್ಲರಿಗೆ ಇವರದು ಮುಕ್ತದ್ವಾರ; ಬಳಿಗೆ ಬಂದವರು ಜೋಲು ಮೋರೆಯಿಂದ ಹಿಂದಿರುಗಿ ದುದೇ ಇಲ್ಲ. ಎಂಥ ಸಹಾಯವೂ ಇವರ ಮನಸಿಗೆ ಮೀರಿರಲಿಲ್ಲ. ವಿದ್ಯಾರ್ಥಿಗಳಿಗಂತೂ ಇವರು ಅಲಭ್ಯ ದೇವತಾ ಸ್ವರೂಪ.

# ಹರಡೇಕರ ಮಂಜಪ್ಪನವರು

ಅಂಕಿತನಾಮಗಳು ಅನ್ವರ್ಥಕನಾಮಗಳಾಗುವ ಸಂಭವ ಬಹಳ. ಇಟ್ಟ ಹೆಸರುಗಳು ಹೆಸರಿಟ್ಟಂತೆ ಕಾಣುವವು. ನಮ್ಮ ನಮ್ಮ ಹೆಸರುಗಳು ಮಂತ್ರಗಳಂತೆ ನಮ್ಮನ್ನು ತಮ್ಮಂತೆ ಮಾಡಿಕೊಳ್ಳುವವು. 'ಹೆಸರು ಹಾಲಯ್ಯ ಮೊಸರಿಗೆ ನೀರಿಲ್ಲ' ಎಂಬ ಅನುಭವಬಂದರೂ, ಹೆಸರೂ 'ಮಧುರ' ಕೃತಿಯೂ ಮಧುರ ಎಂದು ಮಧುರ ಕವಿಯೇ ಹೇಳಿಕೊಳ್ಳುವಂತೆ ಆಗುವದೂ ಉಂಟು. ಒಮ್ಮೆ ಒಬ್ಬರು ನಗೆಯಲ್ಲಿ:– ಕೃಷ್ಣನೆಂಬ ಹೆಸರು ಕಾರಸ್ಥಾನಕ್ಕೂ ಮಧ್ವನೆಂಬ ಹೆಸರು ಪರಪಕ್ಷಖಂಡನಕ್ಕೂ ವೆಂಕಟೇಶನೆಂಬ ಹೆಸರು ಬರಿಗೈತನಕ್ಕೂ ಪ್ರವೃತ್ತಿಸುವದುಂಟು ಎಂದು ಸಿದ್ಧಾಂತಿಸಿ ಒಳ್ಳೆ ಐತಿಹಾಸಿಕರಂತೆ 'ಬೇಕಾದರೆ ಉದಾಹರಣೆಗಳನ್ನು ಕೊಡುವೆ' ಎಂದರು. ಆದರೆ ಇದು ಅಭಿಪ್ರಾಯ ದುರಭಿಮಾನ. ಅದನ್ನು ಬಿಟ್ಟರೂ ತಮ್ಮವರು ತೊಟ್ಟಿಲಲ್ಲಿಟ್ಟ ಹೆಸರು ಜನರು ಜಗದಲ್ಲಿಟ್ಟ ಹೆಸರಿನಂತಾಗುವ ಘಟನೆಯು ಬೆರಗುಗೊಳಿಸುವಂತಹದಾಗಿದೆ.

ಶ್ರೀಮಾನ್ ಮಂಜಪ್ಪನವರನ್ನು ನೋಡಿ ನೋಡಿದಾಗೆಲ್ಲ ಈ ವಿಚಾರವೇ ನನಗೆ ಹೊಳೆಯುವದು. ಅವರ ಉಡುಗೆಯ ಬಿಳಿಖಾದಿ! ಅವರ ಮೈ ಬಿಳಿ ಛಾಯೆ! ಅವರ ಹಣೆಯ ಬಿಳಿ ವಿಭೂತಿ! ಎಲ್ಲವೂ ಬಿಳಿದು, ಸ್ವಚ್ಛ, ಶುಭ್ರ. ನಿರ್ದುಷ್ಟವಿಚಾರಗಳ ಮೂಲಕ ಅವರ ಮಾತೂ ಬಿಳಿ. ನೀತಿ ನಿಷ್ಠೆಯ ಮೂಲಕ ಅವರ ಕೃತಿಗಳೂ ಬಿಳಿ. ಬಿಳಿ ಮಂಜೆ ಮೈಗೊಂಡು ಬಂದಿತೇನೊ ಎನ್ನುವಂತೆ ಅವರನ್ನು ಕಂಡಾಗಲೆಲ್ಲ

ಎನಿಸುವದು. ಅವರ ನೈತಿಕ ಮತ್ತು ನೈಷ್ಠಿಕ ನಿಷ್ಠುರತೆಯು ಮೂಲಕ ಅವರ ಮಾತಿನ ಮಂಜು ಒಮ್ಮೊಮ್ಮೆ ತಣ್ಣಗೆ ಕುಳ್ಳಿರಿಸುವಂತೆ ಮಾಡಿ ದರೂ ಚಳಿಯು ಮೈಚಳಿ ಬಿಡಿಸಿ ಉದ್ಯೋಗ ಪ್ರಿಯತೆಯನ್ನುಂಟು ಮಾಡುವಂತೆ ಅವರ ಮಾತಿನಲ್ಲಿ ಆ ಶಕ್ತಿಯೂ ಉಂಟು. ನನ್ನ ಗೆಳೆಯರ ಲ್ಲಿಬ್ಬರಾದ ಶ್ರೀ. ಕೇಸರಿ ಎಲ್. ಎಲ್. ಬಿ. ಧಾರವಾಡ, ಮತ್ತು ಶ್ರೀ ಹಿರೇಮಠ ಎಲ್. ಎಲ್. ಬಿ. ಹಾವೇರಿ ಇವರಿಬ್ಬರು ಶ್ರೀ ಮಂಜಪ್ಪನವರ ಸಮಾಗಮದಿಂದ ಪ್ರವರ್ತಕ ಬುದ್ಧಿಯವರಾಗಿರುವದನ್ನೂ ಬಲ್ಲೆ; ಅವರ ಸಂಗತಿಯಲ್ಲಿ ತಣ್ಣಗಾದವರನ್ನೂ ಬಲ್ಲೆ. ಅದು ಏನೇ ಇರಲಿ—ಶ್ರೀ ಮಂಜಪ್ಪನವರು ಬಿಳಿಮಂಜಿನಂತಿರುವರು. ಅವರಲ್ಲಿ ಬಿಳಿದಲ್ಲದುದು ಎಂದರೆ ಅವರ ಕಣ್ಣು ಮತ್ತು ಅವರ ಫೌಂಟನ್ ಪೆನ್ನು (Fountain pen).

ಆದರೆ ಇವೆರಡು ಕೂಡ ಅವರು ನಡೆಸಿರುವ ಶುದ್ಧೀಕರಣದ ಮುಖ್ಯ ಸಾಧನಗಳು. ಅಜ್ಞಾನದ ಕತ್ತಲೆಯನ್ನು ಹೊಡೆದೋಡಿಸಿ ಬೆಳಕನ್ನು ಬೀರುವದು—ಅಶುದ್ಧಾಚರಣೆಯನ್ನು ಕಿತ್ತು ಹಾಕಿ ಶುದ್ಧಾಚರ ಣೆಯನ್ನು ನೆಲೆಗೊಳಿಸುವದು—ಇವೇ ಅವೆರಡರ ಕಾರ್ಯ. ಅವರು 'ಧನುರ್ಧಾರಿ'ಯ ಸಂಪಾದಕರೆ ಆಗಲಿ, 'ಖಾದಿ'ಯ ಸಂಪಾದಕರೆ ಆಗಲಿ ಹರಿಹರದ ಬ್ರಹ್ಮಚರ್ಯಾಶ್ರಮದ ಸಂಸ್ಥಾಪಕರೇ ಆಗಲಿ, ಆಲಮಟ್ಟಿಯ ವೀರಶೈವ ವಿದ್ಯಾಲಯದ ಸಂಸ್ಥಾಪಕರೆ ಆಗಲಿ; 'ಭಾರತೀಯರ ದೇಶ ಭಕ್ತಿ'ಯ ಲೇಖಕರೆ ಆಗಲಿ; 'ಬಸವೇಶ್ವರ ಚರಿತ್ರೆಯ' ಲೇಖಕರೆ ಆಗಲಿ ಅವರ ಫೌಂಟನ್ ಪೆನ್ನು ಅಸಂಸ್ಕೃತರನ್ನು ಸುಸಂಸ್ಕೃತರನ್ನಾಗಿಯೂ ನಿರಕ್ಷರರನ್ನು ಸಾಕ್ಷರರನ್ನಾಗಿಯೂ ಬೆಳ್ಳಕ್ಕರಿಗರನ್ನು ಅಕ್ಕರಿಗರನ್ನಾ ಗಿಯೂ ಮಾಡಲು ಕರ್ಮಯೋಗಿಯಂತೆ ತೊಡಗಿದೆ. ಮಂಜಪ್ಪನವರು ಹುಟ್ಟಾ ಬೋಧಕರು ಶಿಕ್ಷಕರು, ಸುಧಾರಕರು. ಅವರ ನಾಡಿನವನೇ ಆದ ಸರ್ವಜ್ಞಮೂರ್ತಿಗೂ ಅವರಿಗೂ ಎಷ್ಟೋ ಸಾಮ್ಯವಿದೆ. ಒಂದು ವೈಷಮ್ಯವೂ ಇದೆ. ಅವನಲ್ಲಿದ್ದ ಹಾಸ್ಯ ಇವರಲ್ಲಿಲ್ಲ. ಸರ್ವಜ್ಞನದು ಪದ್ಯ, ಇವರದು ಗದ್ಯ. ಭೇದವು ಚಿಕ್ಕದಾದರೂ ಅಂತರವು ದೊಡ್ಡದು.

ಮಂಜಪ್ಪನವರು ಕರ್ನಾಟಕವನ್ನು ನಾಡನ್ನಾಗಿ ರಾಷ್ಟ್ರವನ್ನಾಗಿ ಕಟ್ಟುವವರಲ್ಲೊಬ್ಬರು. ಅವರ ಉದ್ಯೋಗವು ಅವ್ಯಾಹತ. ಅವರ

ಪ್ರಯತ್ನವು ವಿರೋಧಿಗಳಿಗೆ ಹಿಂಜರಿಯುವಂತಹದು, ಕಥೆಯೊಳಗಿನ ಆವಿಯಂತೆ ಸಾವಕಾಶವಾದರೂ ಸಂತತವಾಗಿ ಅವರು ಸಾಗಿರುವರು. ಅವರ ಕಾರ್ಯಗತಿಗೆ ಚಿಕ್ಕೆಗಳಂತೆ ಅವಸರವಿಲ್ಲದಿದ್ದರೂ ವಿರಾಮವೂ ಇಲ್ಲ. ಬ್ರಾಹ್ಮಣ ಬ್ರಾಹ್ಮಣೇತರ ಎಂಬೀ ಗಲಾಟೆಯ ಯುಗದಲ್ಲಿ ಅವರು ತಮ್ಮ ವೀರಶೈವ ಸಮಾಜವನ್ನು 'ಕೋಹಂ ಸೋಹಂ'ಗಳೆಂಬಾ ಗಜಿಬಜಿ ಹೊಗಿಸಿ ಒಂದು ಉನ್ನತಸ್ಥಿತಿಗೆ ತರಲು ಹವಣಿಸುತ್ತಿರುವರು. ಆಲಮಟ್ಟಿಯ ವೀರಶೈವ ವಿದ್ಯಾಲಯವು ಈಗಿನ ಅವರ ಪ್ರಯೋಗಶಾಲೆ. ಅವರ ಸಿದ್ಧ ರಸಾಯನಗಳು ಹೊರಬಿದ್ದ ಮೇಲೆ ಅವುಗಳ ಉಪಯೋಗದಿಂದಾಗುವ ಅನುಭವದಿಂದಲೆ ಅವರ ಇಚ್ಛೆಯು ಎಷ್ಟು ಈಡೇರುವದು ಬಿಡುವದು ನೋಡಬೇಕಾಗಿದೆ. ಅವರಂಥ ಪ್ರಯತ್ನವು ಸಂಪೂರ್ಣವಾಗಿ ನಿಷ್ಫಲವಾಗುವದು ಅಸಂಭವ.

ಶ್ರೀ ಮಂಜಪ್ಪನವರು ಮಂಜಿನಂತೆ ಶುಭ್ರವಾಗಿ ನಿಚ್ಚಳವಾಗಿ ಇದ್ದಾರೆ. ಆದರೆ ಅದರಂತೆಯೆ ರಹಸ್ಯಮಯವಾಗಿಯೂ ಇದ್ದಾರೆ. ಅವರು ಸ್ವಭಾವತಃ ಪ್ರಯೋಗ ಶರಣರು. ಕರ್ಮಯೋಗದವರಾದರೂ ವಿಜ್ಞಾನಿಗಳಂತೆ ಪರಿಣಾಮದ ಕಡೆಗೆ ದೃಷ್ಟಿಯಿಟ್ಟು ಕೆಲಸ ಮಾಡತಕ್ಕವರು. ಮಂಜು ರೂಪವನ್ನೂ ಸ್ಥಾನವನ್ನೂ ಗಾಳಿಯ ಅನುರೋಧದಿಂದ ಬದಲಿಸುವಂತೆ ಇವರ ಕಾರ್ಯದಲ್ಲಿ ಪಲ್ಲಟಗಳಾಗಿರುವದುಂಟು. ಆದರೆ ಅದಾವುದೂ ಸ್ವಾರ್ಥದಿಂದಲ್ಲ. ಮಾನವಕುಟುಂಬದ ಹಿತವಾಗುವಂತೆ ನಾಡುನಾಡಿನಲ್ಲಿಯೂ ಐಕ್ಯಜೀವನದ ಆಸ್ತಿವಾರಕ್ಕೆ ಸಮಾಜದಲ್ಲಿ ನೆಲೆ ದೊರೆಯಬೇಕು ಎಂದು ಅವರ ಇಚ್ಛೆ; ಅವರ ಕ್ರಿಯೆ. ಅದಕ್ಕೆ ಬೇಕಾದ ಜ್ಞಾನೋದಯವೇ ನಮ್ಮ ನಾಡಿನ ಭಾಗ್ಯೋದಯ.

# ಆಲೂರ ವೆಂಕಟರಾಯರು

ಶ್ರೀ. ಆಲೂರವರು ಈ ಸಲದ ಸಾಹಿತ್ಯಸಂಮೇಲನದ ಅಧ್ಯಕ್ಷರು. ಮಿಲ್, ಸ್ಪೆನ್ಸರರ ತತ್ವಗ್ರಂಥಗಳನ್ನು ಕನ್ನಡಕ್ಕೆ ಪರಿವರ್ತಿಸುವದರಿಂದ ಇವರ ವಾಙ್ಮಯಸೇವೆಗೆ ಪ್ರಾರಂಭವಾಯಿತು. ಆಗ್ಗೆ ಇವರಿಗೆ ಕನ್ನಡ ಸಾಹಿತ್ಯದ ಪರಿಚಯವೇ ಇಲ್ಲ. ಉತ್ಕಟವಾದ ನೈಜಪ್ರೀತಿಯು ಎಷ್ಟು ಅಮೋಘವಾಗಿ ಕಾರ್ಯವನ್ನು ಮಾಡಿಸಬಲ್ಲದೆಂಬುದಕ್ಕೆ ಇವರು ನಿದರ್ಶನರಾಗಿದ್ದಾರೆ. ಇವರ ರಾಜಕಾರಣವೆ ಇವರಿಗೆ ಕರ್ನಾಟಕದಲ್ಲಿ ದೃಷ್ಟಿಯನ್ನು ನಾಟಿಸಿತು. ಅಂತೆಯೆ ಇವರು ಗ್ರಂಥಕರ್ತನೆಂಬ ಕೀರ್ತಿಯ ರಾಜಮಾರ್ಗವನ್ನು ಹಿಟ್ಟು, 'ವಿದ್ಯಾರಣ್ಯ' 'ಭ್ರಮನಿರಸನ' ದಂಥ ಹತ್ತಿಪ್ಪತ್ತು ಪುಟದ ಸಣ್ಣ ಪುಸ್ತಕಗಳನ್ನು ಬರೆಯಲು ಧೈರ್ಯ ಮಾಡಿದರು. ಅವುಗಳ ಮಹತ್ವವು ಅವುಗಳ ಪರಿಣಾಮದಲ್ಲಿದೆ. ಕನ್ನಡಿಗರ ಭ್ರಮನಿರಸನವಾಗಿ ಅವರಿಗೆ ವಿದ್ಯಾರಣ್ಯರ ದರ್ಶನವಾಯಿತು. ಇದೇನು ಸಣ್ಣ ಕೆಲಸವಲ್ಲ. ಕರ್ನಾಟಕದ 'ಗತವೈಭವ'ವನ್ನು ಇವರು ಕಂಡಿದ್ದೂ ಕನ್ನಡಿಗರಿಗೆ ತೋರಿಸಿದ್ದೂ ತದನಂತರದಲ್ಲಿಯೆ ಇದರಿಂದುಂಟಾದ ಜಾಗೃತಿಯೇ 'ಜಯಕರ್ನಾಟಕದ' ಹಾದಿಯನ್ನು ಇವರಿಗೆ ತೋರಿಸಿತು. ಜಯಕರ್ನಾಟಕದಿಂದ 'ನವಜೀವನ ಗ್ರಂಥ' ಮಾಲೆಗೆ ಇವರು ಹಾರಿದುದು ಹಿರಿದಲ್ಲ. ಇವರ ಗತಿಯು ಗಾಳಿಯಂತಿದೆ. ಬಂದರು ಬಂದರು ಎಂಬಷ್ಟರಲ್ಲಿ ಇವರು ಮುಂದೆ ಹೋಗಿಬಿಡುವರು. ಕರ್ನಾಟಕದ

ಪ್ರಾಣೋಪಾಸಕರಾದ ಇವರು ವಾಯುಸಂಚಲನಸಂಚಲರಾಗಿ ತೋರು
ವದು ಸೋಜಿಗವಲ್ಲ.

ಕರ್ನಾಟಕದ ಹಿರಿಯರಲ್ಲಿ ಆಲೂರವರ ಹೆಸರು ಅದ್ವಿತೀಯವಾಗಿದೆ. ಕಣ್ಣಲ್ಲಿ ತುಂಬುವ ಆಕೃತಿವಿಶೇಷವಾಗಲಿ, ಮನಸ್ಸಿನಲ್ಲಿ ತುಂಬುವ ಮಾತುಗಾರಿಕೆಯಾಗಲಿ ಇವರದಲ್ಲ. ರಾಜಕೀಯ ರಣಾಂಗಣದಲ್ಲಿಯೂ ಇತಿಹಾಸದ ಕ್ಷೇತ್ರದಲ್ಲಿಯೂ ಸಾಹಿತ್ಯಲೋಕದಲ್ಲಿಯೂ ಇವರಿಗೂ ಮಿಗಿಲಾಗಿ ಕೆಲಸ ಮಾಡುವವರಿದ್ದಾರೆ; ಕೈಕೊಂಡ ಕಾರ್ಯಕ್ಕೆ ಧನ ವನ್ನೂ ಕಾಲವನ್ನೂ ಇವರಿಗಿಂತ ಹೆಚ್ಚು ವೆಚ್ಚ ಮಾಡಿದವರು ಇಲ್ಲ ವೆಂದಲ್ಲ. ತಮ್ಮ ಆಚಾರದ ಬಲದಿಂದಲೂ ವಿಚಾರದ ತೇಜದಿಂದಲೂ ಇವರಿಗಿಂತಲೂ ಆದರವನ್ನುಂಟುಮಾಡುವವರೂ, ಜಾತಿಯ ಮೂಲಕ ದೊಡ್ಡ ಮುಂದಾಳೆನಿಸಿಕೊಂಡವರೂ ಪದವಿಯ ಮೂಲಕ ಮಹಾಗೌರ ವಸ್ಥರೆನಿಸಿಕೊಂಡವರೂ ಉಂಟು. ಆಲೂರವರಲ್ಲಿ ಸಂಘಟನೆಯ ಶಕ್ತಿ ಯಾಗಲಿ ಚಳವಳಿಯ ವೃತ್ತಿಯಾಗಲಿ ಜನಸಂದೋಹನಾಯಕನ ಸ್ವಭಾವ ವಾಗಲಿ– ಯಾವುದೂ ಇಲ್ಲ. ಏಕಮುಖವಾಗಿಯೂ ಬಹುಮುಖವಾ ಗಿಯೂ ತಾತ್ಕಾಲಿಕ ತೀವ್ರಾವೇಶದಿಂದಲೂ ಏಕನಿಷ್ಠೆಯಿಂದಲೂ ಕಾರ್ಯ ಮಾಡುವ ಹಲ ಕೆಲವರು ಇವರಿಗಿಂತಲೂ ಹೆಸರಾಗಿದ್ದಾರೆ. ಆದರೆ ಬಹು ಮುಖವಾಗಿಯೂ ಏಕನಿಷ್ಠೆಯಿಂದಲೂ, ಅನನ್ಯಬುದ್ಧಿ ಯಿಂದಲೂ, ಸತತ ಅನುಸಂಧಾನದಿಂದಲೂ ಕರ್ನಾಟಕದ ಸಲುವಾಗಿ ವಿಚಾರ ಮಾಡುವವರೂ ತದನುಸಾರವಾಗಿಯೆ ಆಚರಿಸಲು ಪ್ರಯತ್ನಿ ಸುವವರೂ ಹಿರಿಯರಾದ ಕನ್ನಡಿಗರಲ್ಲಿ ಇನ್ನೂ ಇವರೊಬ್ಬರೇ! ಅದೇ ಇವರ ತಪಸ್ಸು. ಇವರ ಅದ್ವಿತೀಯವಾದ ಹೆಸರು ಅದರ ಫಲವು.

ಆಲೂರವರು ಬಾಯಿ ಹಾಕದ ಮಾತಿಲ್ಲ. ಕೈ ಹಾಕದ ಕೆಲಸ ವಿಲ್ಲ. ಇವರಿಗೆ ತನ್ನದೆನ್ನುವ ಕಾರ್ಯವಿಲ್ಲ. ಕರ್ನಾಟಕದ ಸರ್ವಾಂಗ ಪೋಷಣೆಗೆ ಬೇಕಾಗುವ ಎಲ್ಲ ಮಾತು ಎಲ್ಲ ಕೆಲಸಗಳೂ ಇವರಿಗೆ ಬೇಕಾ ದವುಗಳೆ. ಎಲ್ಲವನ್ನೂ ಇವರು ಮಾಡಿ ಮಾಡಿಸಿರುವರು. ಆಡಿ ಆಡಿಸಿರುವರು. ಕರ್ನಾಟಕದ ಕುಲಪುರೋಹಿತರೆಂದು ಒಬ್ಬರು ಇವರಿಗೆ ಪರಿ ಹಾಸದಲ್ಲಾಡಿದುದು ಈಗ ಪರಮಾರ್ಥವಾಗಿದೆ. ಪುರೋಹಿತರಂತೆಯೆ

ಇವರೂ ಕೆಲಸವನ್ನು ಪ್ರಾರಂಭ ಮಾಡಿಸಿ ಬೇರೆ ಯಜಮಾನರಿಗೆ ಕೆಲಸ ಬಿಟ್ಟು ಕೊಡುವರು. ಇವರ ಕಾರ್ಯಪ್ರವೃತ್ತಿಯೊಡನೊಡನೆಯೆ ನಿವೃತ್ತಿಯು ಮಾತ್ರ ಪ್ರಾರಂಭವಾಗುವವು. ನಾಲ್ಕು ಜನರು ಒಂದು ಕಡೆಗೆ ಕೂಡಿದ ಕೂಡಲೆ ಇವರು ಮತ್ತೊಂದು ಕಡೆಗೆದ್ದು ಹೋಗುವರು. ಇತಿಹಾಸ ಮತ್ತು ಸಾಹಿತ್ಯ ಇವುಗಳು ಜೀವನಮಂಡಲದ ದಕ್ಷಿಣೋತ್ತರ ಧ್ರುವಗಳು. ರಾಜಕಾರಣ ಮತ್ತು ಪತ್ರಿಕಾಸಂಚಾಲನ ಇವುಗಳು ಅವುಗಳ ಪ್ರಯೋಗಶಾಲೆಗಳು. ಈ ಪ್ರಯೋಗಶಾಲೆಯಲ್ಲಿ ಸಿದ್ಧಪಡಿಸಿದ ರಸಾಯನವನ್ನು ಇವರು ತಮ್ಮ ಕರ್ನಾಟಕೋದ್ಯಮದಲ್ಲಿ ಕಾಲಕಾಲಕ್ಕೆ ಉಪಯೋಗಿಸಿರುವರು. ಈ ಪಾಠವನ್ನವರು ಲೋಕಮಾನ್ಯರಿಂದ ಕಲಿತರು. ಯಾವುದಕ್ಕೂ ಧರ್ಮವೂ ತತ್ತ್ವಜ್ಞಾನವೂ ಜೀವಾಳವೆಂಬುದನ್ನು ಅರವಿಂದರಿಂದ ತಿಳಿದುಕೊಂಡು ರಾಷ್ಟ್ರಜೀವನವನ್ನು ಯಾವಾಗಲೂ ಇವರು ತತ್ತ್ವಶಾಸ್ತ್ರದ ಪರಿಭಾಷೆಯಲ್ಲಿಯೇ ಹೇಳುವರು. ಲೋಕಮಾನ್ಯರೂ ಅರವಿಂದರೂ ಅದ್ವೈತ ಸಿದ್ಧಾಂತಗಳನ್ನು ರಾಷ್ಟ್ರೀಯತ್ವದಲ್ಲಿ ಅನ್ವಯಿಸಿ ತೋರಿಸುವಂತೆ ಇವರು ತಮ್ಮ ದ್ವೈತಸಿದ್ಧಾಂತಗಳನ್ನೂ ಆ ವ್ಯಾಪಕಾರ್ಥದಲ್ಲಿ ಅನ್ವಯಿಸುವರು. ಅಂತೆಯೇ ಇವರು ಕರ್ನಾಟಕಾಂತರ್ಗತ ಭಾರತಮಾತೆಯನ್ನು ಪೂಜಿಸುವರು. ಇವರ ದೇಶಭಕ್ತಿಯು ರಾಷ್ಟ್ರಭಕ್ತಿಯ ಉಪಸಿದ್ಧಾಂತವು.

ಆದರೆ, ಇವರಲ್ಲಿ ಬುದ್ಧಿಯ ಏಕಾಗ್ರವೃತ್ತಿಗಿಂತ ವ್ಯಾಪಕವೃತ್ತಿಯು ಹೆಚ್ಚು; ಮೂರ್ತಿಪೂಜೆಗಿಂತ ತತ್ತ್ವಪೂಜೆಯು ಅಧಿಕ; ಆಚಾರನಿಷ್ಠೆಗಿಂತ ವಿಚಾರನಿಷ್ಠೆಯು ಬಹಳ. ರಾಷ್ಟ್ರೀಯ ದೃಷ್ಟಿ ಹೆಚ್ಚು; ರಾಷ್ಟ್ರದರ್ಶನ ಕಡಿಮೆ. ಜನೋದ್ದೀಪನಶಕ್ತಿ ಹೆಚ್ಚು; ಜನನಿರ್ವಹಣಶಕ್ತಿ ಕಡಿಮೆ. ಸಣ್ಣ ಪುಟ್ಟ ಕೊರತೆಯಿಂದ ಅತೃಪ್ತಿ ಹೆಚ್ಚು. ಅಲ್ಪಕಾರ್ಯದಿಂದ ಸಂತುಷ್ಟಿ ಕಡಿಮೆ. ವಿಚಾರಸ್ವಾತಂತ್ರ್ಯದ ಆಡಂಬರಕ್ಕಿಂತ ನಾವೀನ್ಯಪ್ರೀತಿ ಹೆಚ್ಚು. ಪ್ರತಿಯೊಂದು ಮಾತಿನಲ್ಲಿಯೂ ಇವರಲ್ಲೊಂದು ಪ್ರತ್ಯೇಕಾಭಿಪ್ರಾಯವು ಇದ್ದೇ ಇರುವುದು. ಯಾರು ಯಾವ ಮಾತಿನಲ್ಲಿ ಇವರ ಸಲಹೆ ಕೇಳಿದರೂ ನವೀನವಾದುದೊಂದನ್ನು ಇವರು ಹೇಳೇ ಹೇಳುವರು. ಇವರ ವಿಚಾರದಲ್ಲಿ ಪ್ರಗತಿ ಹೆಚ್ಚು.

ಇವರು ನೂತನಪಕ್ಷಗಳನ್ನು ನಿರ್ಮಿಸಿದರೂ ಪಕ್ಷಪಾತ ಕಡಿಮೆ. ಇವರು ಎಲ್ಲ ವಿಚಾರಗಳಿಗೂ ಬೆಂಬಲ ಕೊಟ್ಟರೂ ಯಾವ ವಿಚಾರಕ್ಕೂ ಮುಂಬಲ ಕೊಡುವದು ಕಡಿಮೆ. ಇವರು ಜನರ ನಾಯಕರಾಗದೆ ನೇತ್ರವಾಗಿದ್ದಾರೆ, ಮುಂದಾಳಾಗದೆ ಪ್ರತಿನಿಧಿಗಳಾಗಿದ್ದಾರೆ.

# ಟಿ. ರಾಘವಾಚಾರಿ

ಉಂಗರ ಉಂಗರಗಳಾಗಿ ತಲೆಯ ತುಂಬ ಸುತ್ತಿಕೊಂಡಿರುವ ಕರಿಗೂದಲು; ಷೇಕ್ಸ್‌ಪಿಯರ್, ಹೆನ್ರಿ, ಇರ್ವಿಂಗರಂಥ ಕ್ರಾಪು. ಅಗಲವಾದ ತಿಳಿಯಾದ ಬೊಗಸೆಗಣ್ಣು; ಹೃದಯದೊಳಗಿನ ನೋವು ಕಾವುಗಳನ್ನು ಹಗುರಾಗಿ ಸಹಜವಾಗಿ, ಮೈಯಿಲ್ಲದ ಮಾತಿನಿಂದ, ದನಿಯಿಲ್ಲದ ಉಲಿವಿನಿಂದ ತಿಳಿಸುವ ಕನ್ನಡಿಗಣ್ಣು. ಪಾರ್ಸಿ ಜನರಂತೆ ನೀಳವೂ ಅಲ್ಲ, ತಮಿಳರಂತೆ ದಪ್ಪವೂ ಅಲ್ಲ; ಮೋರೆಗೆ ಒಪ್ಪುವಂಥ ಮೂಗು. ಪ್ರಧಾನವಾದ ಹಣೆ, ತುಂಬಿದ ಗಲ್ಲ. ಅಗಲವಾದ ಎದೆ. ಬಲವಾದ ಮೈಕಟ್ಟು. ಎತ್ತರವಾದ ಆಳು. ಮೋರೆಯಲ್ಲಿ ರಸಿಕತನದ ಮೃದುಹಾಸ. ಇರುವಿಕೆಯಲ್ಲಿ ನಮ್ರ ಗಾಂಭೀರ್ಯ. ಮಾತಿನಲ್ಲಿ ವಿಚಕ್ಷಣೆ.

ನಾನು ಮೊದಲು ರಾಘವಾಚಾರ್ಯರನ್ನು ಕಂಡದ್ದು ಹೀಗೆ. ಆಗ ಮೂಡಿದ ಚಿತ್ರ ಇನ್ನೂ ಮಸಕಾಗಿಲ್ಲ.

೧೯೩೦ರಲ್ಲಿ ಬಳ್ಳಾರಿಗೆ ಬರಬೇಕೆಂದು ಆಚಾರ್ಯರಿಂದ ಆಮಂತ್ರಣ ಬಂತು. ಬೆಂಗಳೂರಿನಲ್ಲಿ ಅವರ ಠೀವಿ ನೋಡಿ ಬಹಮನೀ ಸುಲ್ತಾನರ ಬಿಡಾರದ ಗತವೈಭವವನ್ನು ನೋಡುವೆನೆಂಬ ಕುತೂಹಲದಿಂದ ಹೋದೆ. ಆಚಾರ್ಯರು ನನಗೆ ಕುತೂಹಲ ಹುಟ್ಟಲೆಂದು ಬೆಂಗಳೂರಿನಲ್ಲಿ ಪಿತೂರಿ ಮಾಡಿದ್ದರೋ ಏನೋ! ಮನೆಯಲ್ಲಿ ಮಹಾವೈಭವದ ಗುರುತೇ ಇರಲಿಲ್ಲ. ಎಲ್ಲರ ಮನೆಯಲ್ಲಿದ್ದ ಹಾಗೇ ಸರಳತೆ. ಮನೆಯಲ್ಲಿ ಖುರ್ಚಿ ಮೇಜುಗಳಾಗಲಿ, ವೇಷಭೂಷಣಗಳಾಗಲಿ, ಚಿತ್ರಪಟಗಳಾಗಲಿ ಎಲ್ಲಾ

ನಾದಾ. ಅವರ ದಿವಾನಖಾನೆಯು ಗೋಡೆಗೆ ಗಾಢವಾದ ಹಸರುಬಣ್ಣ. ಅದರಲ್ಲಿ ಒಂದು ದೊಡ್ಡ ಜಂಖಾನೆ. ನನ್ನ ಕಲ್ಪನೆಯು ಆರಮನೆ ಮುರಿದು ಮಣ್ಣಾಯಿತ್ತು.

ಇದೇನು ! ಇಷ್ಟೇಯೆ ಇವರ ಕಲೆ ? ಎಂದುಕೊಂಡೆ.

ಆ ಮಾತಿಗೆ ಒಂದು ವರ್ಷವಾಯಿತು. ಬೆಂಗಳೂರಿನಲ್ಲಿ ಅಮೆಚ್ಯೂರು ನಾಟ್ಯಸಂಘದವರು (A. D. A.) ಕೆಲವು ನಾಟಕ ಆಡಿದರು. ಬೆಂಗಳೂರಿನಲ್ಲಿ ಎ. ಡಿ. ಎ.ಅಂದರೆ ರಾಘವಾಚಾರಿ ಕಂಪನಿ ಅಂದ ಹಾಗೆ. ರಾಘವಾಚಾರಿಯು ವಕೀಲಿ ಬಳ್ಳಾರಿಯೊಳಗೆ. ವಾಸ ಬೆಂಗಳೂರು ಮಾಡರನ್ ಹೋಟೆಲಿನೊಳಗೆ. ಅಥವಾ ಬೆಂಗಳೂರು-ಬಳ್ಳಾರಿ ಗಾಡಿಯು ಎರಡನೆ ತರಗತಿ ಡಬ್ಬಿಯಲ್ಲಿ ಅಂದರೂ ಅಡ್ಡಿಯಿಲ್ಲ. ಶನಿವಾರ ಎ. ಡಿ. ಎ. ಅವರ ನಾಟಕ ಅಂದರೆ ಶನಿವಾರ ಬೆಳಿಗ್ಗೆ ರಾಘವಾಚಾರಿಗೆ ಬೆಂಗಳೂರಿನ ಮಾಡರನ್ ಹೋಟಲಲ್ಲಿ ಕಾಫೀ. ಅವರು ಪ್ರಧಾನ ಪಾತ್ರವನ್ನಭಿನಯಿಸದೆ ಇವರದು ಯಾವ ನಾಟಕವೂ ಆಗುತ್ತಿರಲಿಲ್ಲ.ಅವರಿಗೆ ಕನ್ನಡ ನಾಟಕ ಸೇರುತ್ತಿದ್ದಿಲ್ಲ. ಇವರಿಗೆ ತೆಲಗು ಕಲಿಯದೆ ಹಾದಿಯಿದ್ದಿಲ್ಲ. ಅಂತೂ ಇಂತೂ ಕುಂತೀಮಕ್ಕಳಿಗೆ ರಾಜ್ಯ ಸಿಕ್ಕಂತೆ ಬೆಂಗಳೂರಿನಲ್ಲಿ ತೆಲುಗು ನಾಟಕಗಳ ಸುರಿಮಳೆ. ಅದೊಂದು ಕಲಾಪ್ರಪಂಚದ ಪೌರವ್ಯೂಹ.

* * * *

ಆಚಾರ್ಯರ 'ಗೋಪನ್ನ-ರಾಮದಾಸ' ಪಾತ್ರವು ಜನರ ಪ್ರೀತಿಗೆ ಪ್ರಥಮ ಪಾತ್ರ. ಭಕ್ತ ಶಿರೋಮಣಿ ರಾಮದಾಸನ ಜೀವನದ ಗಂಭೀರ ಶಾಂತಿ, ಅಪಾರ ಕರುಣವನ್ನು ನೋಡಿದವರು ಯಾರೂ ಮರೆಯುವಂತಿಲ್ಲ. ಭಕ್ತನ ಅಸಹಾಯತೆಯೆಷ್ಟು ಅಗಾಧವೋ ಅವನ ವಿಶ್ವಾಸವು ಅಷ್ಟೂ ಗಾಢ, ಅಚಲ. ಸತ್ಯಶೋಧನೆಯ ಸಂಗ್ರಾಮದಲ್ಲಿ ಅಚಲ ವಿಶ್ವಾಸಕ್ಕೇ ಅಖಂಡ ಜಯ. ರಾಘವಾಚಾರಿಗೆ ಈ ಸತ್ಯ ಪೂರ್ಣ ತಿಳಿದಿರಬೇಕು ಎನಿಸುತ್ತದೆ ರಸಿಕರಿಗೆ. ಶಾಂತ, ಕರುಣ ರಸಾಭಿನಯದಲ್ಲಿ ಆಚಾರ್ಯರನ್ನು ಮೀರಿಸಿದವರು ಸಿಗುವದು ದುರ್ಲಭ. ಅವರ ಪಠಾನ ರುಸ್ತುಂ ಪಾತ್ರವೂ ಬಹಳ ಜನಪ್ರಿಯವಾದುದು. ಅವರಿಗೆ ಮೃದುಶೃಂಗಾರ, ಭೀಭತ್ಸ, ಭಯಾನಕ ರಸಗಳ ಪ್ರದರ್ಶನದಲ್ಲಿ

ಬಲವಾದ ಶಕ್ತಿಯಿದೆ. ರುಸ್ತುಂ–ಈ ಮೂರು ರಸಗಳ ವಿಚಿತ್ರ ಉನ್ಮತ್ತ ಮೇಳನ. ಅವರಿಗಾಗಿ ಹೇಳಿ ಬರೆಯಿಸಿದ ಹಾಗಿದೆ ನಾಟಕ. ನಟ ಲೋಕದಲ್ಲಿ ಅವರಿಗೆ ಮೊಟ್ಟಮೊದಲು ಅಗ್ರಸ್ಥಾನ ಕೊಟ್ಟದ್ದು ಆ ರುಸ್ತುಂ ಪಾತ್ರವೇ. ಬಹಳ ದಿನ ಅವರಿಗೆ ರುಸ್ತುಂ ಅಂದರೆ ಪ್ರೀತಿ ಯಿತ್ತಂತೆ.

ರಾಘವಾಚಾರಿ ರಂಗದಲ್ಲಿ ಮೊದಲು ಕಾಲಿಟ್ಟದ್ದು ಕಾಲೇಜಿನಲ್ಲಿ ಓದುವಾಗ. ಷೇಕ್ಸ್‌ಪಿಯರನೇ ಮುಖ್ಯ ಆಧಾರ ಆಗ, ಇಂಗ್ಲಿಷ ನಾಟಕ ಗಳಿಗೆ ೨೦ನೆಯ ಶತಮಾನ ಇನ್ನೂ ಮೊಳೆತಿರಲಿಲ್ಲ. ಒಥೆಲೋ, ಹ್ಯಾಮ್ಲೆಟ್, ಷೈಲಾಕ್, ಮ್ಯಾಕ್‌ಬೆತ್—ಇಂಥ ಪಾತ್ರಗಳಿಂದಲೇ ಪ್ರಯೋಗ ಪ್ರಾರಂಭವಾಯ್ತು ಇವರದು. Well begun is half done ಎಂತ ನಾಣ್ಣುಡಿ. ಶುಭವಾಗಿ ಷುರು ಮಾಡಿದ್ದು ಅರ್ಧ ಆದ ಹಾಗೇ ಕೆಲಸ ಎಂತ. ಈ ಮಾತು ಇವರ ಅಭಿನಯ ಕಲೆಯ ಬಗೆ ಅಕ್ಷರಶಃ ಸತ್ಯವಾಗಿದೆ. ಇವರ ಒಥೆಲೋ, ಹ್ಯಾಮ್ಲೆಟ್, ಷೈಲಾಕ್ ಇತ್ಯಾದಿ ಇಂಗ್ಲೀಷು ನಾಯಕ ಪಾತ್ರಗಳ ಅಭಿನಯವು ಅತ್ಯುತ್ತಮ ಜಾತಿಯದು. ಷೈಲಾಕನ ಜೀನತನ, ಸೇಡು, ಕುತಂತ್ರ, ಮತ್ಸರ ಮೊದಲಾದುದೆಲ್ಲ Shakespeare ಓದಿದರೆ ಸಂಪೂರ್ಣ ತಿಳಿಯುವುದಿಲ್ಲ. ರಾಘವಾಚಾರಿಯ ಅಭಿನಯ ನೋಡಿದರೆ ಅರ್ಥವಾಗುತ್ತದೆ. ಹ್ಯಾಮ್ಲೆಟ್ಟಿನ ಹುಚ್ಚು ವಿಚಾರಗಳು, ವಿೀಸಮೇಷದ ಮನಸ್ಸು ಹೇಗೆ ತಿಳಿಯ ಬೇಕು ರಾಘವಾಚಾರಿ ಅಭಿನಯ ನೋಡದೆ?

ಅಭಿನಯದ ಬೆಲೆಯೇ ಅಂಥದು. ಕವಿಹೃದಯಕ್ಕದು ಕೈದೀವಿಗೆ.

Shakespeare ಬರೆದ ಮರ್ಚೆಂಟ ಆಫ್ ವೆನಿಸ್‌ನಲ್ಲಿ ಪಾತ್ರಪೋಷಣವು ಬಹಳ ವಿಚಿತ್ರ ಜಾತಿಯದು. ಎಲ್ಲಕ್ಕಿಂತ Shylock ನು ಬರೆಸಿ ಕೊಳ್ಳುವ, Antonio ಬರಕೊಡುವ ಸಾಲದ ಪತ್ರದ ವ್ಯವಹಾರ–ಸಂಭವವೇ ಎನ್ನುವ ಸಂದೇಹ, ವಿಚಾರಪರನಾದ ಪ್ರತಿಯೊಬ್ಬ ಕಾಲೇಜು ವಿದ್ಯಾರ್ಥಿಗೂ ಬರುತ್ತದೆ. ಸಾಲ ತೆಗೆದುಕೊಂಡವನ ಮೈಯ ಮಾಂಸವನ್ನು ಕೇಳುವದಾದರೂ ಹೇಗೆ? ಇಂಥ ಮಾತಿಗೆ ಅವನು ಒಪ್ಪುವುದಾದರೂ ಹೇಗೆ? ಇದು ಕೊಡತಕ್ಕೊಳ್ಳುವ ವ್ಯವಹಾರವೇ?

ಏನು ಅನ್ವಯಹಾರ? ರಾಘವಾಚಾರಿ Shylock ಪಾತ್ರ ಅಭಿನಯಿಸುವದು ನೋಡಿದರೆ–Shakespeareನ ಶಕ್ತಿಗೆ ಸ್ವರೂಪ ಬರುತ್ತದೆ. ಅವರು ಅಭಿನಯಿಸಿ ತೋರಿಸಿದಾಗ 'In merry jest we shall put a forfeiture in the bond' ಎಂದಾಗ ಅಸಂಭವ,ಅಮಾನುಷವೆಂದಿದ್ದ ಅಸಾಮಿಗಳೇ ಆಸಾಲದ ಪತ್ರಕ್ಕೆ ಅದೇ ಕರಾರುಗಳ ಪ್ರಕಾರ ಒಪ್ಪಿ ಸಹಿ ಹಾಕಲೂ ಬಹುದು.

ಅದು ಆ ಕವಿಹೃದಯವಿಕಸನವು. ನಟನ ವಿಶೇಷ ಗುಣ. ಆಚಾರ್ಯರಿಗದು ಅಂಗೈನೆಲ್ಲಿಕಾಯಿ.

ಅಭಿನಯವೆಂದರೆ ಆಂಗಿಕ ಚೇಷ್ಟೆಯಲ್ಲ. ಬೈಠಕಿನಲ್ಲಿ ಬಜಾಯಿಸಬೇಕಾದ ಸರಿಗಮಗಳನ್ನು ಸರಾಗವಾಗಿ ಸುರಿಸುವದಲ್ಲ. ಠೀವಿಯಾಗಿ ಜಾಬಯ್ನ್ಯಾಸ ಹಚ್ಚಿದ ಬಣ್ಣದ ಉಡಿಗೆ ಉಡುವದಲ್ಲ. ನಮ್ಮ ದಿನಚರಿಯ ನೀರಸವಾದ ವ್ಯವಹಾರದಲ್ಲಿ ನಾವು ಮಾಡುವ ಅಂಗವಿಕ್ಷೇಪದ ಅನುಕರಣವೂ ಅಲ್ಲ. ಜೀವಿಜೀವಿಯ ಜೀವನದಲ್ಲಿ ಮಾತಿಗೆ ನಿಲುಕದ, ಶಬ್ದಕ್ಕೆ ನಿಲುಕದ, ಒಳಗಿನ ಒಳಗಿನ ಸೂಕ್ಷ್ಮ ತರಂಗಗಳು ಗಳಿಗೆ ಗಳಿಗೆಗೆ ಏಳುತ್ತಿರುತ್ತವೆ. ಅದರಲ್ಲೂ ಭಾವನಾಪ್ರಧಾನ, ವಿಚಾರಪ್ರಧಾನಗಳಾದ ಮನಸುಗಳಲ್ಲಿ ಈ ಚಲನವಲನಗಳು ಬಹಳ. ಅಂಥದಕ್ಕೆ ಮಾತು, ಮೈಕೊಡುವದೇ ಅಭಿನಯದ ಕೆಲಸ.

ತಲ್ಲೀನತೆಯು ಅಭಿನಯದ ಆದಿಸೂತ್ರ.

ಇದೇ 'ನಾಟ್ಯಕಲಾ ವಿಶಾರದ'ನ 'ಪ್ರಪೂರ್ಣತೆ'ತೆಯ ಗುಟ್ಟು. ಇದರ ಫಲವಾಗೇ ಹಿರಣ್ಯಕಶಿಪುಗೂ ಜೀವಿಜೀವಿಗೆ ಸಹಜವಾದ ಮಾರ್ದವ, ಕೋಮಲತೆಗಳು ಇದ್ದವೆಂಬುದರ ಅನುಭವ ಆಚಾರ್ಯರಿಗೆ. ಅವರ ಅಭಿನಯದ ಮೂಲಕ ಜನರಿಗೆ. ಇವರೂ ಕೀ.ಶೇ.ವರದಾಚಾರ್ಯರೂ ಈ ಹಾದಿ ತುಳಿಯದಿದ್ದರೆ ಈಗಿನ ಪೌರಾಣಿಕ ನಾಟಕಗಳಲ್ಲಿ ಕಂಡುಬರುವ ಹೊಸ ದೃಷ್ಟಿ ಇಷ್ಟು ಬೇಗನೆ ಬರುತ್ತಿರಲಿಲ್ಲವೇನೊ !

× × × ×

ಸಂಗೀತದಲ್ಲಿ ಅವರಿಗಿರುವ ಜ್ಞಾನ ಬಹಳ ಹೆಚ್ಚಾದುದಲ್ಲ. ಕಂಠವೂ ಶ್ರಾವ್ಯವಲ್ಲ. ಆದರೂ ಅವರು 'ನೀಸಪದ್ಯ'ಗಳನ್ನು ಅನ್ನುವ ಧಾಟಿ–ಶೈಲಿ ಮೋಹಕವಾದುದು; ರಸವಂತವಾದುದು. ಅವರಂತೆಯೆ ಅನ್ನುವ

ಪದ್ಧತಿಯೇ ಒಂದು ಬೆಳೆದು ಹೋಗಿದೆ ಕೆಲವು ಕಡೆ. ಸಂಗೀತ ಸಾಹಿತ್ಯ
ಗಳ, ಗಾಯನ ಅಭಿನಯಗಳ, ಅಪೂರ್ವ ಮೇಳನದ ಒಂದು ಹಾದಿಯುದು
ಎಂದು ಕೆಲವರ ಮತ. ಗಾನಲುಬ್ಧರಾದವರಿಗೆ ಸ್ವಲ್ಪ ಕೊರತೆಯೆನಿಸು
ವದೂ ಉಂಟು. ಸಾಹಿತ್ಯವು ಬಹಿಷ್ಕೃತ ವಸ್ತು ಬಹಳ ಜನ ಅಭಿನಯ
ಪಟುಗಳಿಗೆ. ಅವರಿಗೆ ಅದು ಹಿತವಾಗುವದಿಲ್ಲ. ಆಚಾರ್ಯರಿಗೆ ಹಾಗಿಲ್ಲ.
ಅವರ ಮನೆತನದಲ್ಲೇ ಸಾಹಿತ್ಯಪ್ರೇಮ ಬೆಳೆದು ಬಂದಿದೆ. ಅವರ ತಂದೆ
ಸಂಸ್ಕೃತ ಪಂಡಿತರು, ಕಲಾಪ್ರಿಯರು. ಅವರ ಸೋದರಮಾವ ಸುಪ್ರ
ಸಿದ್ಧ ಸಾಹಿತಿಗಳು. ಆಂಧ್ರನಾಟಕ ಪಿತಾಮಹನೆಂದು ಹೆಸರು ಹೊಂದಿ
ತೆಲುಗಿನಲ್ಲಿ ನಾಟಕಕ್ಕೆ ತಳಹದಿ ಹಾಕಿದವರು. ಆಶು ಕವಿಗಳು. ಆಚಾ
ರ್ಯರಿಗೆ ನಾಟಕ, ನಾವೆಲ್ಲ ಅಂದರೆ ಬಹಳ ಆಸೆ. ಅಭಿನಯಕ್ಕೆ ಮನಸು
ಕೊಡದೆ ಸಾಹಿತ್ಯಕ್ಕೆ ಮನಸ್ಸು ಕೊಟ್ಟಿದ್ದರೆ ಉತ್ತಮತರದ ಸಾಹಿತಿ
ಯಾಗಬಹುದಾಗಿತ್ತೊ ಏನೊ. ಆದರೆ—ರಂಗಸ್ಥಲ ಮಾತ್ರ ಮಾಂಗಲ್ಯ
ಹೀನವಾಗುತ್ತಿತ್ತು.

ಆದರೆ ಆಚಾರ್ಯರು ತಮ್ಮ ತಂದೆಗೆ ಕೃತಜ್ಞರಾಗಿರಬೇಕಾದುದು
ಕಲಾಪ್ರೇಮಕ್ಕಾಗಿಯಲ್ಲ. ತಮಗೆ ಅವರು ಕೊಟ್ಟ ದೃಢ ದೇಹಕ್ಕಾಗಿ.
ತಾವು ಎಷ್ಟು ಬಳಲಿಸಿದರೂ ಬಾಡದ ಮೈಕಟ್ಟಿಗಾಗಿ. ಅವರ ತಂದೆಯ
ಶರೀರ ವಜ್ರ ಶರೀರ ಎಂದು ಆಗಿನ ಜನರು ಅನ್ನುತ್ತಿದ್ದರಂತೆ.

* * * *

ಆಚಾರ್ಯರ ಜೀವನ ಸರಳವಾಗಿದೆ. ಬೆಳಿಗ್ಗೆ ಬೇಗನೆ ಏಳುತ್ತಾರೆ.
ಊಟ ಉಡುಗೆಗಳಲ್ಲಿ ಬಹಳ ಸಾದಾ. ಮಾತು ಮನಸಿಗೆ ಸಮಾಧಾನವಾ
ಗುವಂಥದು. ಸ್ವಲ್ಪ ಸಲಿಗೆಯಾದರೆ ಅವರ ಮೃದುಹಾಸ್ಯದ ಅನುಭವ
ವಾಗುತ್ತದೆ. Pickwic Papers, Tit-Bits ಇವು ಅವರಿಗೆ ಬಹಳ ಪ್ರೀತಿ
ಯವು. ಅವರ ರಸಿಕತೆಯು ರಾಜ್ಯಕ್ಕೇ ಗೊತ್ತಿದೆ. ಈಗಿಲ್ಲವಾದರೂ ಹರೆ
ಯದಲ್ಲಿ ಅವರಿಗೆ ಫ್ಯಾಶನ್ ಬಹಳ. ದಿನಚರಿಯ ಜೀವನದಲ್ಲಿ ಇವರಿಗೆ
ಸಿಟ್ಟು ಬಹಳ ಕಡಿಮೆ. ಕಠಿಣ ಪ್ರಸಂಗಗಳಲ್ಲಿ ಶಾಂತವಾಗಿ ಧೈರ್ಯ
ದಿಂದ ವರ್ತಿಸಿದುದನ್ನು ನಾನು ಬಲ್ಲೆ. ಬುದ್ಧಿಯಲ್ಲೂ ಆಚಾರ್ಯರು
ಚುರುಕು. ಬಳ್ಳಾರಿ ಪ್ರಾಂತಕ್ಕೇ ಹೆಸರಾದ ವಕೀಲರು. ಕೇಳಿದರೆ

ಆಚಾರ್ಯರ ಆರ್ಗ್ಯುಮೆಂಟ್ ಕೇಳಬೇಕು ಎಂದು ಹಳ್ಳಿಯಲ್ಲಿ ಅತ್ತ ಕಡೆ ಆಡಿಕೊಳ್ಳುತ್ತಾರೆ. ಅವರ ಬುದ್ಧಿಗೆ ಬಳ್ಳಾರಿ ಸಂದಿಗೊಂದಿ. ಶ್ರೀ. ರಾಜಗೋಪಾಲಾಚಾರ್ಯರನ್ನು ಸೇಲಂದಿಂದ ಮದರಾಸಿಗೆ ಸೆಳೆದಂತೆ ಯಾರಾದರೂ ಮಹಾತ್ಮರು ಇವರನ್ನೂ ಮದರಾಸಿಗೆ ಎಳೆದಿದ್ದರೆ ಚೆನ್ನಾಗುತ್ತಿತ್ತೋ ಏನೋ ?

ಆಚಾರ್ಯರ ಔದಾರ್ಯ ಬಹಳ ದೊಡ್ಡದು. ಕೊಡಗೈಯ ದೊರೆ. ಒಂದು ಉಗಾದಿಯ ದಿನ (೧೯೨೩) ಇಬ್ಬರೂ ಊರೊಳಗೆ ಹೊರಟಿದ್ದೆವು. ಅವರ ಕೈಯಲ್ಲಿ ಒಂದು ರೂಪಾಯಿ ನೋಟುಗಳ ಪುಸ್ತಕಗಳು ನಾಲ್ಕೊ ಐದೋ. ಬೀದಿಯಲ್ಲಿ ಸಿಕ್ಕ ಭಿಕ್ಷುಕನಿಗೆಲ್ಲ ಒಂದು ನೋಟು. ಎಲ್ಲ ಮುಗಿದ ಮೇಲೇ ಮನೆಗೆ ಬಂದೆವು. ಇವರ ದಾನದಿಂದ ಎಷ್ಟೋ ಜನ ಮುಂದೆ ಬಂದರು. ಇವರ ಮಾತೃಭಕ್ತಿಯಂತೂ ಮಾದರೀ ಜಾತಿ ಯದು.

ವಿನಯವೊಂದು ಅವರ ಜೀವಾಳ. ಹಣ, ಪದವಿ, ಗೌರವ, ಪಾಂಡಿತ್ಯ—ಎಲ್ಲಾ ಇದ್ದರೂ ಹೆಮ್ಮೆ ಮಾತ್ರ ಹತ್ತಿರಲೇ ಬರಲಿಲ್ಲ. ಎಲ್ಲೊ ಒಂದು ಹಾಡು ಬಂದರೆ, ಒಂದು ವೇಷ ಹಾಕಿದರೆ, ಜನರಿಗೆ ತಲೆ ತಿರುಗುತ್ತೆ. ಆಚಾರ್ಯರಿಗೆ ಪೆಟ್ಟಿಗೆ ತುಂಬ ಪದಕಗಳಿವೆ. 'ನಾಟ್ಯಕಲಾವಿ ಶಾರದ,' 'ನಾಟ್ಯಕಲಾ ಪ್ರಪೂರ್ಣ' ಎಂತ ಬಿರುದುಗಳು ಬೇರೆ. ಆದ ರೇನು ಅವೆಲ್ಲಾ ಅಪ್ರಕಟಿತ ವಾರ್ತಾಮಹೋದಧಿಯಲ್ಲೇ. ಬಯಲಿಗೆ ಬರುವ ಹಾಗಿಲ್ಲ. ಕೀಳು ಮೇಲೆನ್ನದೆ, ಹಿರಿಯ ಕಿರಿಯರೆನ್ನದೆ, ಗಂಡು ಹೆಣ್ಣೆನ್ನದೆ—ಎಲ್ಲರೊಡನೆಯೂ ಸರಸವಾಗಿರುವ ಸಹೃದಯತೆ ಆಚಾರ್ಯರ ವಿಶಿಷ್ಟ ಗುಣ. ಅಂತೇ ಅವರ ಗುಂಪಿನಲ್ಲಿ ಹಿರಿಯರಿಗಿಂತ ಹುಡುಗರೂ, ಹೆಣ್ಣುಮಕ್ಕಳೂ ಹೆಚ್ಚು. ಹುಡುಗರನ್ನು -- ಪ್ರತಿಭಾಶಾಲಿಗಳಾದ ಹುಡುಗರನ್ನು ಕಂಡರೆ ಅವರಿಗೊಂದು ಹುಚ್ಚು; ಪ್ರೀತಿ. ಆದರೆ ನಂಬಿದ ವರನ್ನು ತಲೆಯ ಮೇಲೇರಿಸಿಕೊಳ್ಳುವದು ಅವರ ದೌರ್ಬಲ್ಯ. ಅವರ ಗೆಳೆ ತನಗಳಲ್ಲಿ ಈ ದುರ್ಬಲತೆಯು ಬಹಳ.

*                *                *                *

ಆಚಾರ್ಯರು ತೀವ್ರ ಸಂಸ್ಕರಣವಾದಿಗಳೆಂದು ಪ್ರತೀತಿ. ಅವರ

ಕೆಲವು ವ್ಯವಹಾರ ಹಾಗೇ ಅನಿಸುತ್ತವೆ. ಹರಿಜನ ಪಾಠಶಾಲೆಯೊಂದು ತೆರೆದಿದಾರೆ. ಮೂಢ ಮತಾಚಾರಗಳನ್ನು ಮಣ್ಣುಗೂಡಿಸಿದಾರೆ. ಹೆಣ್ಣು ಮಕ್ಕಳನ್ನು ರಂಗಸ್ಥಳಕ್ಕೆಳತಂದಿದಾರೆ. ತಮ್ಮ ಹೆಣ್ಣು ಮಕ್ಕಳನ್ನೇ, ತಮ್ಮ ಹೆಂಡತಿಯನ್ನೇ ರಂಗಕ್ಕೆ ಹತ್ತಿಸಿದರು. ಸಂಸ್ಕರಣದ ಬಗ್ಗೆ ತೀವ್ರವಾಗಿ ವಾದಿಸುತ್ತಾರೆ. ಆದರೆ, ನಿಜವಾಗಿ ಆಚಾರ್ಯರು ಆಚಾರ ಪ್ರಿಯರು. ಪುನಸ್ಸಂಸ್ಕಾರಕ್ಕೆ ಎಡೆಗೊಡದ ಸಂಸ್ಕರಣವೂ ಒಂದು ಆಚಾರ. ಹಳೆಯದನ್ನು ಕೆಡಹಿ ಹೊಸ ಆಚಾರ ಕಟ್ಟುವ, ಸಂಪ್ರದಾಯಬದ್ಧ ಮನೋವೃತ್ತಿ ಇವರದು. ಬೆಳಿಗ್ಗೆ ಎದ್ದು ಸ್ನಾನ ಮಾಡಿದ ಕೂಡಲೆ ನಾಮ ಹಚ್ಚಿಕೊಳ್ಳುವದನ್ನು ಎಂದೂ ಅವರು ಮರೆಯುತ್ತಿರಲಿಲ್ಲ ಬೇಗ ಅಳಿಸಿ ಹೋಗುವಷ್ಟು ಸೀರಾಗಿ ತೀಡುತ್ತಾರೆ. ಇಷ್ಟೇ. ಒಮ್ಮೆ ತಮ್ಮ ಗುರುಗಳಿಗೆ ನಮಸ್ಕಾರ ಮಾಡಲಿಲ್ಲವೆಂದು ಒಬ್ಬರ ಮೇಲೆ ಬೇಸರಗೊಂಡುದನ್ನು ನಾನು ಬಲ್ಲೆ. ತೆಲುಗು ನಾಟಕವನ್ನು ಬಿಟ್ಟು ಕನ್ನಡ ನಾಟಕವನ್ನು ಕನ್ನಡ ನಾಡಿನಲ್ಲಿ ಆಡುವದಕ್ಕೆ ಇವರನ್ನು ಒಪ್ಪಿಸಲು ಕುರಿಕೋಣ ಬಿದ್ದು ಹೋದವು. ಆದರೂ ಆಚಾರ್ಯರು ಸಂಸ್ಕರಣವಾದಿಗಳೆಂಬ ಹೆಸರು ತಪ್ಪಿಲ್ಲ. ಹೆಸರಿಡುವದು ಜನಜಂಗುಳಿಯ ಜನ್ಮಗುಣ.

* * * *

ಅಭಿನಯದಲ್ಲಿ ಆಚಾರ್ಯರಿಗೆ ಅಗ್ರಮರ್ಯಾದೆ ದೊರೆಯಲು ಅವರ ಆತ್ಮಗತ ಭಾಷಣಗಳೇ ಕಾರಣ. ಉದ್ಬುದ್ಧನೆಯ, ರಸದ ಏರಿಳಿತಗಳ ವರ್ಣನೆಯ, ಸ್ವಗತದ Soliloquy ಗಳನ್ನು ರಸವಂತವಾಗಿ, ಅರ್ಥ ಪೂರ್ಣವಾಗಿ, ಮಂದಿಯ ಮನಸಿಗೆ ಹಿಡಿಸುವಂತೆ ಹೇಳುವದರಲ್ಲಿ ಅವರ ಕೀರ್ತಿ ಬಹಳ. ರಾಮದಾಸನ ಭಕ್ತಿಪರವಶತೆ, ರುಸ್ತುಂನ ಉನ್ಮಾದ, ನಳನ ದುಃಖಾವೇಗ, ದಶರಥನ ಶೋಕಗಳು, ಆ ತರಂಗ ತರಂಗಗಳಿಂದ ತುಂಬಿದ, ಭಾವಪ್ರವಹಣಾನುಕೂಲವಾದ, ರಸಸಮುದ್ರಗಳಾದ Soliloquy ಗಳಿಲ್ಲದಿದ್ದರೆ, ಆ ಪರಕಾಷ್ಠತೆಯಿಲ್ಲದಿದ್ದರೆ, ಸಪ್ಪಗಾಗಿ ಸಿಪ್ಪೆಯಾಗುತ್ತಿದ್ದವು; ತಾನ ಇಲ್ಲದ ಗಾನದಂತೆ. Shakespeare ನ ಪ್ರಸಾದವಿದು ಆಚಾರ್ಯರಿಗೆ. ಅವನ ನಾಟಕಗಳಲ್ಲಿನ ಆತ್ಮಗತಗಳೇ ಆ ಜಾತಿಯವು.

ರೂಢಿ ರುಚಿಯಾದರೆ ಬಂಧನವಾಗುತ್ತದೆ. ಆಚಾರ್ಯರ ಆತ್ಮಗತಗಳ ರೂಢಿಯೂ ಹೀಗೇ. ಸನ್ನಿವೇಶಗಳನ್ನು ಹೇಗೋ ಜೋಡಿಸಿಕೊಂಡು Soliloquy ಗಳನ್ನು ಸೃಷ್ಟಿಸಬೇಕಾಗಿ ಬಂದಿದೆ ಅನೇಕ ಸಾರಿ.

× × × ×

ಇಷ್ಟು ದಿನ ಆಚಾರ್ಯರು ನಟರಾಗಿದ್ದರು. ಈಗ ರಂಗಸುಧಾರಣೆಯ ಕಡೆಗೆ ಒಲಿದಿದ್ದಾರೆ. ಸ್ತ್ರೀ ಪಾತ್ರವನ್ನು ಸ್ತ್ರೀಯರೇ ಧರಿಸಬೇಕೆಂದು ಈಗೊಂದು ಚಳವಳಿಯನ್ನು ಕೈಕೊಂಡಿದ್ದಾರೆ. ಆಚಾರ್ಯರ ಕೋಮಲ ಜೀವಕ್ಕೆ ಚಳವಳಿಯ ಚಾಲಕತ್ವದ ಕಠಿನತೆ ಸಾಧ್ಯವಿಲ್ಲ. ಅದನ್ನು ಬಯಸಿ ಇದನ್ನು ಕಳಕೊಂಡಂತಾಗಿದೆ ಇತ್ತೀಚಿನ ಅವರ ಅಭಿನಯದಲ್ಲಿ.

ಆಚಾರ್ಯರು ಇಂಗ್ಲೆಂಡಿಗೆ ಹೋದಾಗ Bernard Shaw ನಂಥವನ ಮುಂದೆ ಷೈಲಾಕ್ ಪಾತ್ರವನ್ನು ಅಭಿನಯಿಸಿ ತೋರಿಸಿದರಂತೆ. "Better Stick to your pulbie prosecutor's post" ಎಂದನಂತೆ ಆ ಕುಚೋದ್ಯಗಾರ. ಆಚಾರ್ಯರ ಓಘ ನಾಟ್ಯಕಲೆಯನ್ನು ಬಿಟ್ಟು ಸುಧಾರಣೆಗಳ ಸುಳ್ಳು ಮೋಹದ ಕಡೆಗೆ ಹರಿದರೆ ಅವನಾಡಿದ ಕುಚೋದ್ಯದ ಮಾತು ಕಾರಣಿಕದ ನುಡಿಯೇ ಆಗಬಹುದೇನೋ.

ರೂಢಿ ರುಚಿಯಾದರೆ ಬಂಧನವಾಗುತ್ತದೆ. ಆಚಾರ್ಯರ ಆತ್ಮಗತಗಳ ರೂಢಿಯೂ ಹೀಗೇ. ಸನ್ನಿವೇಶಗಳನ್ನು ಹೇಗೋ ಜೋಡಿಸಿಕೊಂಡು Soliloquy ಗಳನ್ನು ಸೃಷ್ಟಿಸಬೇಕಾಗಿ ಬಂದಿದೆ ಅನೇಕ ಸಾರಿ.

× × × ×

ಇಷ್ಟು ದಿನ ಆಚಾರ್ಯರು ನಟರಾಗಿದ್ದರು. ಈಗ ರಂಗಸುಧಾರಣೆಯ ಕಡೆಗೆ ಒಲಿದಿದ್ದಾರೆ. ಸ್ತ್ರೀ ಪಾತ್ರವನ್ನು ಸ್ತ್ರೀಯರೇ ಧರಿಸಬೇಕೆಂದು ಈಗೊಂದು ಚಳವಳಿಯನ್ನು ಕೈಕೊಂಡಿದ್ದಾರೆ. ಆಚಾರ್ಯರ ಕೋಮಲ ಜೀವಕ್ಕೆ ಚಳವಳಿಯ ಚಾಲಕತ್ವದ ಕಠಿನತೆ ಸಾಧ್ಯವಿಲ್ಲ. ಅದನ್ನು ಬಯಸಿ ಇದನ್ನು ಕಳಕೊಂಡಂತಾಗಿದೆ ಇತ್ತೀಚಿನ ಅವರ ಅಭಿನಯದಲ್ಲಿ.

ಆಚಾರ್ಯರು ಇಂಗ್ಲೆಂಡಿಗೆ ಹೋದಾಗ Bernard Shaw ನಂಥವನ ಮುಂದೆ ಷೈಲಾಕ್ ಪಾತ್ರವನ್ನು ಅಭಿನಯಿಸಿ ತೋರಿಸಿದರಂತೆ. "Better Stick to your pulbie prosecutor's post" ಎಂದನಂತೆ ಆ ಕುಚೋದ್ಯಗಾರ. ಆಚಾರ್ಯರ ಒಪ್ಪು ನಾಟ್ಯಕಲೆಯನ್ನು ಬಿಟ್ಟು ಸುಧಾರಣೆಗಳ ಸುಳ್ಳು ಮೋಹದ ಕಡೆಗೆ ಹರಿದರೆ ಅವನಾಡಿದ ಕುಚೋದ್ಯದ ಮಾತು ಕಾರಣೀಕದ ನುಡಿಯೇ ಆಗಬಹುದೇನೊ.

ಬೇಂದ್ರೆಯವರ ಕವನಗಳೇ ಹಾಗೆ. ಕೇಳುವವರಿಗೆ ಹುಚ್ಚು ಹಿಡಿಸಿ ಬಿಡುತ್ತವೆ. ಮಡಿಕೇರಿಯ ಸಮ್ಮೇಲನಕ್ಕೆ ಹೋಗಿದ್ದ ಗೆಳೆಯರು 'ಕುಣಿಯೋಣು ಬಾರ' ಹಾಡಿ ಹಾಡಿ ದಣಿದು ಹೋದರು. ಕೆಲವು ದಿನಗಳ ಮೇಲೆ 'ಗರಿ' ಅಚ್ಚಾಯಿತು. ಕೊಡಗಿನ ಕಡೆಯಿಂದ ಬಂದ ಪತ್ರಗಳಲ್ಲೆಲ್ಲ 'ಕುಣಿಯೋಣ ಬಾರ' ಕಳಿಸಿರಿ—ಎಂದು ಆಗ್ರಹ.

ಗೆಳೆಯರ ಗುಂಪಿನ ಕವಿತೆಗಳಲ್ಲಿ, ಪ್ರಧಾನವಾಗಿ ಬೇಂದ್ರೆಯವರ ಕವಿತೆಗಳಲ್ಲಿ ಒಂದು ವಿಶಿಷ್ಟ ರೀತಿಯ ಸಂಕೇತ ಪದ್ಧತಿ ಕಾಣಬರುತ್ತದೆ. ಇವರ ಕವಿತೆಯ ತಳದಲ್ಲೆಲ್ಲಾ ಆಳವಾದ ವಿಚಾರವಿದೆ; ಆಧ್ಯಾತ್ಮ ದೃಷ್ಟಿಯಿದೆ. 'ಹಕ್ಕಿ ಹಾರುತಿದೆ' 'ಕುಣಿಯೋಣು ಬಾರ' ಮುಂತಾದ ಕವನಗಳಲ್ಲಿ ಈ ವಿಶ್ವದರ್ಶನದ ರೇಖೆಗಳು ಸ್ಪಷ್ಟವಾಗಿ ಮೂಡಿವೆ. ಬೇಂದ್ರೆಯವರಲ್ಲಿ ಈ ದೃಷ್ಟಿ, ಈ ಧ್ಯಾನ ಬಲಿತಂತೆ ಅವರ ಕವನಗಳ ಅರ್ಥವೂ ಗುಹ್ಯವಾಗಹತ್ತಿದೆ. ಇವರ ಕವನಗಳನ್ನು ಆಸೆಯಿಂದ ಕೇಳುವವರು ಬಹಳವುಂದಿ. ಅದರ ಪ್ರತಿಭೆ ಗುರುತಿಸಿದವರು ಕಡಮೆ. ತೀ. ನಂ. ಶ್ರೀ. ಯವರು ಅಂದಂತೆ ಬೇಂದ್ರೆಯವರ ಕವಿತೆ ಒಂದು ಚಿಲುಮೆ. ನೋಡಲಿಕ್ಕೆ ಚಿಕ್ಕದು. ತೋಡಿದಷ್ಟು ಅರ್ಥ ಉಕ್ಕುತ್ತಲೇ ಇರುತ್ತದೆ. ತೋಡುವ ಶ್ರಮ ಮಾತ್ರ ಒಂದೊಂದು ಸಲ ಸ್ವಲ್ಪ ಹೆಚ್ಚಾಗಬಹುದು. ಶ್ರೀ. ಕೊಣ್ಣೂರರು ಬೇಂದ್ರೆಯವರ ಕವನಗಳು ಕಠಿನ, ನಾರಿಕೇಳಪಾಕ ಎಂದದ್ದೂ ಇದೇ ಅರ್ಥದಲ್ಲಿ. 'ಕೃಷ್ಣಾಕುಮಾರಿ'ಯ ಹುನ್ನುಡಿಯಲ್ಲಿ Browning ನ ವಿಚಾರಾವೇಗ ಕಾಣಬರುತ್ತದೆಯೆಂದು ಬೇಂದ್ರೆಯವರೇ ಬರೆದುಕೊಂಡದ್ದೂ ಇದೇ. ಉದ್ದಾಮ ಪಂಡಿತರಿಗೆ ತಕ್ಕ ಸಾಮಗ್ರಿ ಇವರ ಕವಿತೆಗಳಲ್ಲಿದೆ. ಅಷ್ಟೇ ಅಲ್ಲ. ಕನ್ನಡಭಾಷೆ ಮಾತ್ರ ಬರುವವರಿಗೂ ಇವರ ಕವಿತೆ ಅರ್ಥವಾಗುತ್ತದೆ. ಪೂರ್ಣ ಅರ್ಥವಾಗಲಿ ಆಗದಿರಲಿ, ಭಾವ ಸಿಗಲಿ ಸಿಗದಿರಲಿ ಇವರ ಕವಿತೆ ಕೇಳಿ ಮುಗ್ಧರಾಗದವರು ಇಲ್ಲ. ಓದುವ ಧಾಟಿ, ಪದಬಂಧ, ನುಡಿಯ ಅಂದ, ಉಕ್ತಿ ವೈಖರಿ, ಪ್ರಾಸದ ಸೊಬಗು;— ಕೇಳುವವರಿಗೆ ಎದೆದುಂಬಿ ಬರುತ್ತದೆ. ಅದೊಂದು ಸಂಮೋಹನ ಮಂತ್ರ.

ಬೇಂದ್ರೆಯವರ ಕವನಗಳೇ ಹೀಗೆ. ಅವರ ಬಾಯಲ್ಲೇ ಕೇಳಬೇಕು

ಅವರ ಕವನ. ಭಾರತದ ಬಿಂದೂರಾಯರ ಕಾವ್ಯ ಗಾಯನ ಕೇಳಿದ್ದೇನೆ ಅವರದು ಹರಿದಾಸರ ಹಾದಿ. ಅದೇ ಮುಖಭಂಗಿ. ಮೂರ್ತಿಯೂ ಅಷ್ಟೇ. ದನಿ ಗಂಡುದನಿ. ಒಂದು ತಾಸು ಭಾರತ ಕೇಳಿದ ಮೇಲೆ ಬಿಂದೂರಾಯರನ್ನು ಬಾಯಿತುಂಬ ಹೊಗಳಬೇಕೆನಿಸುತ್ತದೆ. ಕಳಲೆ ಸಂಪತ್ಕುಮಾರಾಚಾರ್ಯರ ಕಾವ್ಯ ವಾಚನವು ಬೇಸಗೆಯ ಬೆಳಗು ಮುಂಛಾವಿನ ತಂಗಾಳಿಯಂತೆ ಎಂದು ಗೆಳೆಯರೊಬ್ಬರಿಂದ ಕೇಳಿದ್ದೇನೆ. ಬೇಂದ್ರೆಯವರ ಗಮಕಕ್ಕೆ ಈ ಗುಣಗಳಾವೂ ಇಲ್ಲ. ದನಿ ಗಡುಸು, ಮುಖಭಂಗಿಯಲ್ಲಿ ಶರಣರ ಗುಂಗು, ಹಾವಭಾವಗಳ ಅಭಾವ. ಧಾಟಿಯಲ್ಲಿ ಒಂದೇ ಪಾಠ-ತಂದ-ನಾನಾ ಪದಗಳ ಮಾದರಿ; ಆದರೂ ಅದರಲ್ಲಿ ಒಂದು ಲಾಸ್ಯ, ಒಂದು ಗತಿ ಇದೆ. ಹಾವಾಡಿಗರ ಪುಂಗಿಯಂತೆ ಮೈಮರೆಸುತ್ತದೆ. ಏಕತಾರಿ ಬೇಂದ್ರೆಯವರಿಗೆ ಪ್ರೀತಿಯದು. ಅವರ ಶ್ರುತಿಗೆ ದನಿಗೂಡಿಸಿ, ಕಣ್ಣು ಅರೆಮುಚ್ಚಿ, ದೃಷ್ಟಿ ನಿಲ್ಲಿಸಿ, ಕೂತು ಬೇಂದ್ರೆಯವರು ತಮ್ಮ ಕವನಗಳನ್ನು ಅನ್ನುವದನ್ನು ಕೇಳಬೇಕು. ಆ ಮುಖಮುದ್ರೆ, ಆ ಪರವಶತೆ, ಆ ಗಮಕ, ಆ ಪದಜಾಲ; ಅದೊಂದು ಮಂತ್ರಹಾಕಿದಂತೆ. ಕೇಳುವವರು ಗೊಂಬೆಗಳಾಗುತ್ತಾರೆ. ರಸಾನಂದದಲ್ಲಿ ತೇಲಿ ಹೋಗುತ್ತಾರೆ.

ವಿಚಾರ ಆಳವಾದ ಕಡೆ ರಸಕ್ಕೆ ಸೊನ್ನೆಬೀಳುತ್ತದೆ. ಆದರೆ ಪ್ರತಿಭಾವಂತ ಕವಿಗೆ ರಸ, ವಿಚಾರಗಳನ್ನು ಮೇಳೈಯಿಸುವದು ಸಾಧ್ಯ, ಸಹಜ. ರಸ ವಿಚಾರಗಳು ಪಾರ್ವತೀ ಪರಮೇಶ್ವರರಂತೆ. ಆ ಕೂಡಿಕೆಯೇ ಕಲೆಯ ಪರಮಾವಧಿ. ಬೇಂದ್ರೆಯವರು ಅಂಥ ಕವಿಗಳು. ಬರಬರುತ್ತ ಇವರ ಕವನಗಳಲ್ಲಿ ನುಡಿಯ ನಡಿಗೆ ಒಳ್ಳೇ ಹದಕ್ಕೆ ಬಂದಿದೆ. 'ಕೋರಿದ ಸ್ವರವನ್ನು ಥಟ್ಟನೆ ನುಡಿಸುತ್ತದೆ' ಕಾವ್ಯದ ಜೀವಾಳ ಧ್ವನಿ. ಕನ್ನಡ ಸಾಹಿತಿಗಳಿಗೆ ಇವರು ನೀಡಿದ ದಾನ ಅದು. ಇವರ ರೂಪಣ ಶಕ್ತಿ ಕನ್ನಡಕ್ಕೆ ಹೊಸದು. ಕನ್ನಡದಲ್ಲಿ ರೂಪಕದರಾಜ್ಯ ಬೇಂದ್ರೆಯವರದು. Imagination means use of symbols ಎಂದು ಇಮರ್ಸನ್ ಇವರಿಗಾಗಿ ಹೇಳಿದಂತಿದೆ. ಛಂದೋವೈವಿಧ್ಯ ಸಫಲವಾಗಿದೆ. ಕವನಗಳ ಧಾಟಿ ಹಿಡಿತಕ್ಕೆ ಸಿಕ್ಕಿದೆ. ಮಿಡಿದಂತೆ ಬಳುಕುತ್ತದೆ. ಅವರ ಏಕತಾರಿಯ ನಾದದಲ್ಲಿ ಸೇರಿಹೋಗಿ ಕುಣಿಯುತ್ತದೆ. ಶಬ್ದಗಳು

ಇನ್ನಾರ ಕವಿತೆಯಲ್ಲೂ ಅಷ್ಟು ಸಾಧಿಸಿಲ್ಲ. ಆ ಗತಿ, ಆ ಲಯ, ಹಾಂಗೊಮ್ಮೆ, ಹೀಗೊಮ್ಮೆ, ತಿಕಿದಿಮಿ ಗಿಮಿಗಿಮಿ,– ಆ ತಾಂಡವ; ಬೇಂದ್ರೆಯವರ ಕವಿತೆ, ಕಾವ್ಯ ಲೋಕದ ನಟರಾಜ. ಮಾಸ್ತಿಯವರು ಇವರನ್ನು ಗಾರುಡಿಯವನೆಂದದ್ದು, ತೀ. ನಂ. ಶ್ರೀ.ಯವರು ಮಾಂತ್ರಿಕ ನೆಂದದ್ದು ಹೊಗಳಿಕೆಯಲ್ಲ. ಹದಿನಾರಾಣೆ ನಿಜ.

ಬೇಂದ್ರೆಯವರು ಒಮ್ಮೆ ಸರಕಾರಕ್ಕೆ ಒಂದು ಅರ್ಜಿ ಬರೆದಿದ್ದರು. ಅದರಲ್ಲಿ ತಮ್ಮನ್ನು ತಾವು ಹೀಗೆ ವರ್ಣಿಸಿಕೊಂಡಿದ್ದರು; 'ಸ್ವಭಾವದಲ್ಲಿ ವೇದಾಂತಿ, ವೃತ್ತಿಯಲ್ಲಿ ಮಾಸ್ತರ' ಅದು ಪೂರಾ ನಿಜ. ಮಾಸ್ತರ ಕೆಲಸ ವಲ್ಲದೆ ಬೇರೆ ಯಾವ ಕೆಲಸವೂ ಅವರಿಗೆ ಒಗ್ಗುವದಿಲ್ಲ. ಒಗ್ಗುವ ಸಂಭವ ವಿಲ್ಲ. 'ಜಯಕರ್ನಾಟಕವು' ಗೆಳೆಯರ ಗುಂಪಿನ ಕೈಗೆ ಬಂದಾಗ ಬೇಂದ್ರೆ ಯವರು ಅದರ ಕೆಲಸವನ್ನೆಲ್ಲ ನೋಡಿಕೊಳ್ಳಬಹುದಾದ ಪ್ರಸಂಗ ಬಂದಿತ್ತು. ಅವರಿಗೆ ಅದು ಸಾಧ್ಯವಾಗಲಿಲ್ಲ. ಗೆಳೆಯರ ಗುಂಪಿನ ಬಲ ದಿಂದ ಹುಟ್ಟಿ ಬೆಳೆದು ಬಂದ ಜಯಕರ್ನಾಟಕವು ಮುಂದೆ ಗುಂಪನ್ನೇ ಮುರಿದು, ಸ್ವತಂತ್ರವಾಗಿ, ಗೆಳೆಯರ ಸಂಬಂಧವನ್ನೇ ಕಡಿದುಕೊಂಡಾಗ ಅದನ್ನು ತಮ್ಮ ಮೇಲೇ ತಕ್ಕೊಂಡು ಬಿಡಬಹುದಾಗಿತ್ತು. ಮುರಿದ ಗುಂಪನ್ನು ಕಟ್ಟಬಹುದಾಗಿತ್ತು. ಬೇಂದ್ರೆಯವರಲ್ಲದೆ ಮತ್ತಾರಾದರೂ ಆಗಿದ್ದರೆ ಹಾಗೆ ಮಾಡುತ್ತಿದ್ದರು. ಇವರಿಗೆ ಮಾತ್ರ ಅದು ಸಾಧ್ಯ ವಿರಲಿಲ್ಲ. ಇಂಥ ಕೆಲಸಗಳಿಗೆ ಬೇಕಾಗುವ ಕರ್ತೃತ್ವಶಕ್ತಿಯಾಗಲಿ ವ್ಯವಸ್ಥೆಯಾಗಲಿ ಅವರಲ್ಲಿಲ್ಲ. ಕಡಿವಾಣ ಕೈಯಲ್ಲಿ ಹಿಡಿದು ಗುಂಪನ್ನು ನಡೆಯಿಸಬಲ್ಲ ದಿಟ್ಟತನ ಅವರದಲ್ಲ. ಗೋಪುರದಂತೆ ತಲೆಯೆತ್ತಿಕೊಂಡು ಗೆಳೆಯರ ತಲೆಮೆಟ್ಟಿ ನಿಲ್ಲುವ ಪ್ರತಿಷ್ಠೆಯೂ ಅವರಿಗಿರಲಿಲ್ಲ 'He is an inspiration, not a defenite plan. A great radiance fixed to no post'.

ನೀತಿಶಾಸ್ತ್ರದಲ್ಲಿ ಬಿಡಿಸಲು ಬಾರದ ಕಗ್ಗಂಟಿನ ತೊಡಕು ಒಂದು ಹೇಳಿರಿ ಇವರಿಗೆ; ಅದಕ್ಕೆ ಉತ್ತರ ಹಿಂದೆಯೇ ಬರುತ್ತದೆ. ತಡವೇ ಇಲ್ಲ. ಅದೇ ವ್ಯವಹಾರದಲ್ಲಿ ನಿಜವಾದ ತೊಡಕೊಂದು ಬರಲಿ, ಅದಕ್ಕೆ ಸಾವಿರ ಕವಲು ಕೊನರಿಸಿಕೊಂಡು ಬಿಡುತ್ತಾರೆ. Hamlet ನ ವಿಲೀಸಪೋಷದ

ಮನಸ್ಸು ಇವರದು. ಅನುಮಾನ—Inference — ಬಹಳ. ಅದೊಂದು ಶಾಸ್ತ್ರವೇ ಆಗಿದೆ, ಅವರ ಕೈಯಲ್ಲಿ. ಅನೇಕ ಸಾರೆ ಅವು ಅನುಮಾನ ಗಳೇ ಸರಿ. ಮಹಾಕಾರ್ಯಗಳಿಗೆ ಹಿಂದೆ ಮುಂದೆ ನೋಡದ ನುಗ್ಗುವ ಎದೆಗಾರಿಕೆ ಬೇಕು. ಆದದ್ದೆಲ್ಲ ಆಗಲಿ ಎಂಬ ಮುಂಜಾವು ಬೇಕು. ಹತ್ತು ಜನರ ಹಣೆಯ ಬರೆಹದ ಹೊಣೆಗಾರಿಕೆಯ ಅಭಿಮಾನ ಬೇಕು. ಅನುಮಾ ನಕ್ಕಾಗಲಿ ಅನಿಶ್ಚಯಕ್ಕಾಗಲಿ ಅಲ್ಲಿ ಎಡೆಯಿಲ್ಲ. ನಾಲ್ಕು ಜನರ ನಾಯಕ ತ್ವವೆಂಪರೆ ಮೊಗವಾಡ ಹಾಕಿದ ಕುದುರೆಯ ಹಾಗೆ. ಎಡಬಲ ಯಾವುದೂ ಇಲ್ಲ; ಅದರ ನೋಟ ಇದಿರಿಗೆ ಮಾತ್ರ. ಜನರಿಗೆ ಬೇಕಾದದ್ದು ಗುಣಾ ಕರವಲ್ಲ;ಹಣಕಾಸು. ತೊಡಕು ಬಿಡಿಸಲು ತತ್ತ್ವವೇಕೆ?ದುಡುಕು ಬೇಕು, ಮಿಂಚಿನವೇಗ ಬೇಕು. ಈ ಹನ್ನೆರಡು ವರುಷದ ಸಿದ್ಧತೆಯಾಗಿಯೂ ಬೇಂದ್ರೆಯವರ ಕತ್ತಿನಲ್ಲಿ ಮುಂದಾಳ್ತನದ ಮಾಲೆ ಬಿದ್ದಿಲ್ಲ. ಮೇಲೆ ಹೇಳಿದ ಗುಣಗಳು ಯಾವೂ ಅವರಲ್ಲಿಲ್ಲ. ವೇದಾಂತದ ಮಿಥ್ಯೆಗೆ ಅಂಜಿಕೆ ಯಿಲ್ಲ ಇವರಿಗೆ. ವ್ಯವಹಾರದ ಸತ್ಯಕ್ಕೆ ಮಾತ್ರ ಹಂಚಿಕೆಯಿಲ್ಲ. ಅದನ್ನು ಕಳೆಯುತ್ತದೆ ಇವರ ಬುದ್ಧಿ. ಇದನ್ನು ಅನುಭವಿಸುವದು ಇವರ ವಿಧಿ.

ಅವರ ಸ್ವಭಾವವೂ ಅಷ್ಟೆ. ಚಿಕ್ಕಂದಿನಲ್ಲಿ ಬಡತನ. ಹರೆಯದಲ್ಲಿ ಪದೇ ಪದೇ ನಿರುದ್ಯೋಗದ ತ್ರಾಸು. ಸಂಸಾರದಲ್ಲಿ ಕಷ್ಟ. ಹೀಗಾಗಿ ಉತ್ಸಾಹದ ಆವೇಶ ಅವರ ಪಾಲಿಗೆ ಸಿಗಲಿಲ್ಲ. ಬಂದದ್ದೆಲ್ಲಾ ಬರಲಿ ಎಂಬ ದಾರ್ಢ್ಯ ಮಾತ್ರ ಬಂತು. ಮೊದಲೇ ವಿರಕ್ತ ಸ್ವಭಾವ, ಮೇಲೆ ವೇದಾಂ ತದ ಅಭ್ಯಾಸ. ಸಾಲದ್ದಕ್ಕೆ ಸಂಸಾರದಲ್ಲಿ ಕಹಿಗುಟುಕು. ಬೇಂದ್ರೆಯ ವರ ಪ್ರಕೃತಿಯಲ್ಲಿ ಉದಾಸೀನತೆ ತಾನೇ ತಾನಾಗಿ ಬಿಟ್ಟಿದೆ. ಮೂರು ಹೊತ್ತು ಪುಸ್ತಕ, ಮಾತು; ಉಳಿದದ್ದರಲ್ಲಿ ಅವರಿಗೆ ಆಸೆ ಕಡಿಮೆ. ಕರ್ನಾಟಕದ ಎಲ್ಲ ಮೂಲೆಗಳಿಂದ ಅವರಿಗೆ ಕರೆ ಬಂದಿತ್ತು. ಬರುತ್ತಲೇ ಇದೆ. ಇವರದು ಮಾತ್ರ ಎಲ್ಲಕ್ಕೂ ಒಂದೇ ಉತ್ತರ. ಬರುವದಕ್ಕೆ ಅನು ಕೂಲವಿಲ್ಲ. ಅದಕ್ಕೆ ಇಪ್ಪತ್ತು ಕಾರಣಗಳು. ನಿಜವಾದ ಕಾರಣ ಅವರ ಸ್ವಭಾವವೇ ಸರಿ. ಗಾಳಿ ಬಂದಾಗ ತೂರಿಕೊಳ್ಳುವದು ಈಗಿನವರ ಮುಖ್ಯ ಸೂತ್ರ. ಎಣ್ಣೆ ಬಂದಾಗ ಕಣ್ಣು ಮುಚ್ಚಿಕೊಳ್ಳುವ ಇವರಿಗೆ

ಅದು ಗೊತ್ತಿಲ್ಲ ! ಸ್ವಲ್ಪ ಗೊತ್ತಿದ್ದರೆ !–ಗುಂಪಿನ ಹಣೆಯು ಬರೆಹವಾಗಲಿ, ಬೇಂದ್ರೆಯವರ ಪರಿಸ್ಥಿತಿಯಾಗಲಿ ಹೀಗಿರುತ್ತಿರಲಿಲ್ಲ.

ಅಗುಳನ್ನು ಕಂಡರೆ ಸಾಕು ಓಡಿಬರುವ ಮೀನಿನಂತಲ್ಲ ಇವರು. ಸದ್ದು ಕೇಳಿದರೆ ಸಾಕು ಚಿಪ್ಪಿನೊಳಗೆ ಸೇರಿಕೊಳ್ಳುವ ಆಮೆಯಂತೆ.

ಈ ಉದಾಸೀನತೆ ಅವರ ಬಾಳಿನ ರೀತಿಯಲ್ಲೇ ಸುಸುಳಿಕೊಂಡು, ಬಲಿತು ಹೋಗಿದೆ. ತಿಥಿವಾರ ನಕ್ಷತ್ರಗಳಿಗೆ ಇವರು ದಾಸರೇನಲ್ಲ. ಆದರೂ ತಿಂಗಳಗಟ್ಟಲೆ ಗಡ್ಡ ಬೆಳಿಸಿಕೊಂಡು ಇರುವದರಲ್ಲಿ ಇವರು ಹೆಸರಾದಷ್ಟು ಯಾವ ಕರ್ಮಠರೂ ಆಗಿಲ್ಲ. ಧಾರವಾಡದ ಕರ್ನಾಟಕ ಕಾಲೇಜಿನಲ್ಲಿ ಒಂದು ಸಲ ಇವರ ಕವಿತಾ ವಾಚನವಾಯಿತು. ಅಲ್ಲಿನ ಇಂಗ್ಲಿಷ ಪ್ರೊಫೆಸರರು ಅಧ್ಯಕ್ಷರಾಗಿದ್ದರು. ಮರುದಿನ ಮಾತಿನಲ್ಲಿ ಅವರು, "Mr. Bendre is a very clever man but he does not shave himself" ಎಂದರು. ಬೇಂದ್ರೆಯವರಿಗೆ ಇದನ್ನು ಹೇಳಿದಾಗ ಅವರು ಹೀಗೆ ಕೂಡಿಸಿದರು " ಇವರು ಎರಡನೆಯವರ ಹಜಾಮತಿ ಮಾಡತಾರೆ. ತಮ್ಮದು ಮಾಡಿಕೊಳ್ಳುವದಿಲ್ಲ. "

ಒಮ್ಮೆ ಜಯಕರ್ನಾಟಕದಲ್ಲಿ ಇವರ ಚಿತ್ರ ಅಚ್ಚು ಮಾಡಬೇಕಾದ ಪ್ರಸಂಗ. ಇದ್ದದ್ದು ಒಂದೇ ಪಡಿಯಚ್ಚು. ಅದರಲ್ಲಿ ಮೂರು ತಿಂಗಳ ಗಡ್ಡ. ಬೇರೆ ಫೋಟೋ ತೆಗೆಸಬೇಕಾಯಿತು. ಅದರಲ್ಲಿ ಟೋಪಿ ಸೊಟ್ಟ; ಅಂಗಿ ಅಂದವಿಲ್ಲ, ಇವರು ಅಂದವಾಗಿ ಬಟ್ಟೆಬರೆ ಹಾಕಿಕೊಂಡದ್ದನ್ನು ಯಾರೂ ನೋಡಿಲ್ಲ. ಅಂದವಿಲ್ಲದಿದ್ದರೆ ಅಷ್ಟೆ ಬೆಳ್ಳಗೆ ಒಗೆದದ್ದಾದರೂ ಇರಲಿ ಎಂಬ ಹಟವೂ ಇಲ್ಲ. ನೊಳಕ್ಕೈಯಗಲದ ಮಸಿಪಂಜೆ ಉಟ್ಟು ಮೂರು ದೇಶ ಸುತ್ತಿ ಬಂದಾರು. ಅದರ ಪರಿವೆಯೇ ಅವರಿಗಿರುವದಿಲ್ಲ. ಇವರ ಹೆಂಡತಿ ಇವರನ್ನು ಬಿಟ್ಟು ಒಂದೆರಡು ದಿನದ ಮಟ್ಟಿಗೆ ಬೇರೆ ಊರಿಗೆ ಹೋಗಬೇಕಾಗಿ ಬಂದರೂ, ಇವರಿಗೆ ಊಟದ ವ್ಯವಸ್ಥೆ ಮಾಡೇ ಹೋಗಬೇಕು. ಸಾಹಿತ್ಯದಲ್ಲೂ ಹೀಗೇ. ಅದು ಬರೆಯಬೇಕು ಇದು ಬರೆಯಬೇಕೆಂಬ ಹಂಚಿಕೆ ಬಹಳ. ಬರೆದೇ ಬಿಡುವ ಚಟವಿಲ್ಲ. ಹತ್ತು ವರ್ಷಗಳ ಹಿಂದೆ ಬರೆಯಬೇಕೆಂದು ಲೆಕ್ಕ ಹಾಕಿದ 'ಕಾವ್ಯಯೋಗ' ಇನ್ನೂ ಶ್ರೀ ಗಣೇಶಾಯನಮಃ ದಲ್ಲೇ. 'ಸುಮುಹೂರ್ತೇ ಸಾವಧಾನ' ಎರಡನೆ

ಪಾಠವನ್ನು ಕಂಡಿಲ್ಲ. 'ಪೂರ್ಣ ಯೋಗ'ಕ್ಕೆ ಯೋಗ ಬಂದಿಲ್ಲ. ಎಷ್ಟೋ ಹೀಗೆ. ಹಳೆಯ ನೋಟು ಬುಕ್ಕುಗಳನ್ನು ಮೂಟೆ ಕಟ್ಟಿ ಎಸೆದಿದ್ದಾರೆ ಮೂಲೆಯಲ್ಲಿ. ಅದರಲ್ಲಿರುವ ಕವಿತೆಗಳನ್ನು ಆರಿಸಿ ಬರೆದು ಅಚ್ಚಿಗೆ ಕಳಿಸುವದಕ್ಕೆ ಬೇಸರ. ಅಲ್ಲಲ್ಲಿ ಬರೆದ ಟಿಪ್ಪಣಿಗಳು ಸೂಚನೆಗಳು ಇವೆ. ಅದನ್ನು ವಿಸ್ತಾರವಾಗಿ ಬರೆದು ಮುಗಿಸುವ ಶ್ರದ್ಧೆ ಸಾಲದು. 'ಸ್ವಧರ್ಮ'ವನ್ನು ಕೆಲದಿನ ಗೆಳೆಯರ ಗುಂಪಿನವರು ನಡೆಸಿದರು. ಆಗ ಅರ್ಥ ಬರೆದ 'ಸಾಯೋ ಆಟ' ಅಲ್ಲಿಗೇ ಸಮಾಪ್ತಿ. ಜಯಕರ್ನಾಟಕದ ಆಗ್ರಹಕ್ಕೆ ಅಷ್ಟಿಷ್ಟು ಬರೆದರು. ಮಾಸ್ತಿ ವೆಂಕಟೇಶ ಅಯ್ಯಂಗಾರ್ಯರ ಬಲವಂತದಿಂದ 'ಗರಿ' ಬಯಲಿಗೆ ಬಂತು. ಇಷ್ಟೇಯೆ ಬೇಂದ್ರೆಯವರು ಬರೆದಿರೋದು ? ಎಂತ ಬನ್ನ್ಮೆ ಅಂದಿದ್ದರು, ಬಲ್ಲರು. ಮಾಸ್ತಿಯಂಥವರು ಮತ್ತಿಬ್ಬರು ಸಿಕ್ಕರೆ ಸರಿ. ಇಲ್ಲದಿದ್ದರೆ ಆ ಪ್ರಶ್ನೆಗೆ ನೂರುವರ್ಷ ಆಯುಸ್ಸು. ಅವರ ಮಾತಿನ ರೀತಿಯಲ್ಲೇ ಹೇಳುವದಾದರೆ ಇವರ ವೃತ್ತಿ ಸ್ವಭಾವಗಳೇ ಇವರಿಗೆ ಸಾಧಕ—ಅದೇ ಇವರಿಗೆ ಬಾಧಕ.

*   *   *   *

ಬೇಂದ್ರೆಯವರ ಬುದ್ಧಿ ಬಹಳ ಚುರುಕು, ಹರಿತ; ಸಾಣೆಹಿಡಿದ ಕತ್ತಿಯಂತೆ. ಕಂಡ ಕೂಡಲೆ ಕೂಲಂಕಷವಾಗಿ ಗುಣದೋಷಗಳನ್ನು ಗುರುತಿಸುವ ಕಣ್ಣು. ವಿಮರ್ಶೆಯಲ್ಲಿ ನಿಷ್ಪಕ್ಷಪಾತವಾಗಿ ನ್ಯಾಯವಾಗಿ ತೂಕ ಮಾಡುವ ವಿವೇಕ. ಕವಿಹೃದಯವನ್ನು ಸರಿಯಾಗಿ ಗ್ರಹಿಸಬಲ್ಲ ಸಹೃದಯತೆ. ತಮ್ಮ ಸಿದ್ಧಾಂತ ಸಾಧಿಸಲಿಕ್ಕೆ, ಪ್ರತಿಪಕ್ಷವನ್ನು ನಿರುತ್ತರ ಮಾಡಲಿಕ್ಕೆ ಬೇಕಾದ ಪ್ರಚಂಡ ತರ್ಕಶಕ್ತಿ. ಅದರ ಜೊತೆಗೆ ತರ್ಕ ಮಾಡುವ ತಾಳ್ಮೆ. ಇವರೊಡನೆ ಪ್ರತಿಪಕ್ಷವಾದ ಮಾಡುವದೆಂದರೆ ಬಹಳ ಬಿಗಿಯಾದ ಕೆಲಸ. ಅಂಗೈಯುದ್ದಲ್ಲೇ ಮುಂಗೈಯೂ ಇದೆ. ತುದಿಯಿದ್ದಲ್ಲಿ ಬುಡವಿರಲೇಬೇಕು. ಬೇಂದ್ರೆಯವರ ತರ್ಕದಲ್ಲಿ ಇದು ಚನ್ನಾಗಿ ತಿಳಿಯುತ್ತದೆ. ಇವರಿಗೆ ಆಗದವರೊಬ್ಬರು ಆಡಿಕೊಂಡರಂತೆ, 'ಅವರ ಮಾತೇನು ತಗೋಳ್ರಿ, ಯಾರಿಗೂ ಅರ್ಥವಾಗದ್ದು.' ಬೇಂದ್ರೆಯವರು ಈ ಮಾತು ಕೇಳಿ ಅಂದರು; 'ಅವರಿಗೆ ಅರ್ಥವಾಗದಿದ್ದರೆ ಬೇಡ. ನಿಮಗೆ ಅರ್ಥವಾಗುವದಿಲ್ಲೆಂದು ಹೇಳಿದಾಗ ನೀವು ಹೇಗೆ

ಸುಮ್ಮನಿದ್ದಿರಿ? ನಿಮ್ಮನ್ನು ದತ್ತರು ಅಂದ ಹಾಗೆ ಆಗಲಿಲ್ಲೇನು?'
ನಾವು ತುದಿಯಲ್ಲಿ ನಿಂತು ಮಾತಾಡಿದರೆ ಇವರು ಬುಡಕ್ಕಿಳಿದು ಪರೀಕ್ಷೆ
ಮಾಡುತ್ತಾರೆ. ಬುಡದಿಂದ ಮೊದಲು ಮಾಡಿದರೆ ತುದಿಯವರೆಗೆ ಹತ್ತಿ
ಅಲ್ಲಾಡಿಸಿ ಬಿಡುತ್ತಾರೆ. ಈ ತುದಿಬುಡಗಳ ತಿಕ್ಕಾಟದಲ್ಲಿ ಯಾವ ಹೊತ್ತಿ
ನಲ್ಲಿ ಯಾವ ಪದ್ಧತಿಯಂತೆ ಮಾತುಕತೆಯಾದೀತೆಂಬ ನೇಮವಿಲ್ಲ. ಅದರ
ತೋಫಿನ ಮುಂದೆ ಎಂಥ ಗಟ್ಟಿ ಕೋಟೆಯೂ ನಿಲ್ಲುವದಿಲ್ಲ. ಎಷ್ಟೋ
ಮೀಸೆ ಮಣ್ಣಾಗಿವೆ. ಆದರೆ ಎಲ್ಲರ ತರ್ಕಕ್ಕೆ ಒಂದೇ ಅಲಗು; ಚೂಪಾದ
ಕತ್ತಿ. ಇವರ ತರ್ಕಕ್ಕೆ ಸುತ್ತಲೂ ಮೊನೆಯೇ ಚಕ್ರದಂತೆ. ಸೋಲು
ಗೆಲುವುಗಳ ಸಾಧನೆಯಲ್ಲ; ಸತ್ಯಾಸತ್ಯಗಳ ಶೋಧನೆ ಅದು. ಹಿಂದೆ
ಆಸ್ತಿಕನಾದ ಒಬ್ಬ ವೇದಾಂತಿಯಿದ್ದನಂತೆ. ಅವನ ದೀರ್ಘತತ್ತ್ವ ಚಿಂತ
ನೆಯ ಪರಿಣಾಮದಲ್ಲಿ ದೇವರಿಗೇ ಸೊನ್ನೆ ಬಿತ್ತು. ಬಹಳ ದಿನದಿಂದ ಪೂಜೆ
ಮಾಡಿಕೊಂಡಿದ್ದ ಮೂರ್ತಿ. ಆ ಅಭ್ಯಾಸದಿಂದ ಮೂಡಿದ್ದ ಅಭಿಮಾನ.
ಆದರೇನು? ತನ್ನ ಸಿದ್ಧಾಂತಕ್ಕೆ ಬಾಗುವ ಮೊದಲನೆ ತಲೆ ತನ್ನದೇ ತಾನೆ?
ಮೂರ್ತಿ ಮಹಾಪ್ರವಾಹದಲ್ಲಿ ಸೇರಿಹೋಯಿತು. ಹೀಗೇ ಎಷ್ಟೋ
ಸಲ ಇವರ ಚಕ್ರ ಇವರಿಗೇ ಸಂಚಕಾರ. ಹೋದವರ್ಷದ ಜಯಕರ್ನಾ
ಟಕದ ಒಡಕಿನಲ್ಲಿ ಅವರು ತುಳಿದ ಹಾದಿ ಅದಕ್ಕೆ ಸಾಕ್ಷಿ. ಕಾರಣಾಂತರ
ಗಳಿಂದ ಅವರಿಗೆ ತಮ್ಮ ಮಾಸ್ತರ ಕೆಲಸ ಉಳಿಸಿಕೊಳ್ಳುವದು ಸಾಧ್ಯವಿರ
ಲಿಲ್ಲ. ಗುಂಪಿನ ಅಂತಃಕಲಹದಲ್ಲಿ ಸ್ವಲ್ಪ ಗಟ್ಟಿ ಗುಡುಗು ಹಾಕಿದ್ದರೆ
ಅವರಿಗೆ ಉಪಜೀವನದ ತೊಡಕೂ ಆಗುತ್ತಿರಲಿಲ್ಲ. ಗುಂಪಿನ ಗುಲ್ಲೂ ಅಡ
ಗುತ್ತಿತ್ತು. ಅವರಿಗೆ ಅಷ್ಟು ಸೌಕರ್ಯ, Preference ಸಿಗುವದು ಕಷ್ಟ
ವಾಗಿರಲಿಲ್ಲ. ಮಂಡಲದಲ್ಲಿ ಕೆಲವರಿಗೆ ಉಪಜೀವನದ ತೊಡಕು ಅಷ್ಟಿರ
ಲಿಲ್ಲ. ಅಂಥವರ ಬದಲು ಇವರಿಗೆ ಅಲ್ಲಿ ಸ್ಥಲವಿದ್ದೇ ಇತ್ತು. ಮೂರು
ತಿಂಗಳ ಮಾತುಕತೆಗಳಾದವು. ಕಡೆಗೆ ಬೇಂದ್ರೆಯವರಿಗೆ ಶಾಲೆಯಲ್ಲಿ
ಸ್ಥಲ ಸಿಗಲಿಲ್ಲ; ಜಯಕರ್ನಾಟಕದಿಂದ ಜಾರಿಕೊಳ್ಳಬೇಕಾಯಿತು.

ಬೇಂದ್ರೆಯವರಿಗೀಗ ನಾಲ್ವತ್ತರ ಪ್ರಾಯ. ಲೌಕಿಕ ರೀತಿಯಲ್ಲಿ
ಲೇಶವನ್ನೂ ಸಾಧಿಸುವವಾಗಿಲ್ಲ. ನಾಲ್ವತ್ತು ರೂಪಾಯಿನ್ನಾದರೂ
ತಮ್ಮದೆಂದು ತೆಗೆದಿಟ್ಟಿಲ್ಲ. ಒಳ್ಳೇ ಮಾಸ್ತರರೆಂದು ಹೆಸರು. ಆದರೂ

ನಾಲ್ಕು ಸಾರೆ ನೌಕರಿಯಿಲ್ಲದೆ ನಿರುದ್ಯೋಗದಲ್ಲಿ ನರಳಿದರು. ಈಗಲೂ ಅದೇ ಹಾಡು. ಹೊಸ ಹುರುಪೊಂದು ಈಗಿನ ಕರ್ನಾಟಕದ ಸಾಹಿತಿಗಳಲ್ಲಿ ಕಾಣಬರುತ್ತಿದೆ. ಹೊಸಬಗೆಯೇ ಮೂಡಿದೆ ಆದರೆ ಬೇಂದ್ರೆಯವರು ಕವಿಚಕ್ರವರ್ತಿಗಳಾಗಿಲ್ಲ. ನೊನ್ನೆ ಮೊನ್ನೆ ಮುಂಬಯಿ ಯೂನಿವರ್ಸಿಟಿಯಲ್ಲಿ ಕಾಲೇಜಿನ ತರಗತಿಗಳಿಗೆ ಒಂದು ಚಾರಿತ್ರಿಕ ನಾಟಕ ಇಟ್ಟಿದ್ದರು. ಪಠ್ಯಪುಸ್ತಕ ಸಮಿತಿಯವರ ನಿರ್ಣಯವಾದ ಮೇಲೆ ಆ ಪುಸ್ತಕ ಗಡಿಬಿಡಿಯಲ್ಲಿ ಅಚ್ಚಾಯಿತಂತೆ. ಇವರಿಗೆ ಅಂಥ ಯಾಸ ಪ್ರೋತ್ಸಾಹಸವೂ ಸಿಕ್ಕಿಲ್ಲ. ಆ ಬಿಸಿಲುಗುದುರೆಯ ಬಯಕೆಯೂ ಇವರಿಗೆ ಬಲವಾಗಿಲ್ಲ. ಸಾಧಾರಣ ಜನರ ಜಯಾಪಜಯಗಳಿಗೆ ಅಳತೆಯಿದೆ, ಲೆಕ್ಕವುಂಟು. ಬ್ಯಾಂಕುಗಳಲ್ಲಿ ಅದರ ಬಾವುಟ ಹಾರುತ್ತದೆ. ಇವರ ಬಾಳು ಆ ಹಾದಿಯಲ್ಲೇ ಹರಿಯಲಿಲ್ಲ. ಕವಿ ರವೀಂದ್ರ, ತುಸುಮಟ್ಟಿಗೆ ಎ. ಇ. ಕವಿ—ಮುಖ್ಯವಾಗಿ ಅರವಿಂದ ಘೋಷ, ಇವರ ತತ್ತ್ವಗಳೇ ಅವರ ಬಾಳುವೆಯ ತಳಹದಿ. ಬಾಳು ಬರಿಯ ಬಯಲೂ ಅಲ್ಲ, ಹಚ್ಚನೆ ಮೈದಾನವೂ ಅಲ್ಲ, ಕಡಿದಾದ ಕಗ್ಗಲ್ಲ ಕಣಿವೆ, ಅದೊಂದು ಕರವಾಳ. ಬಾಳುವೆ ಒಂದು ಆಟ ಒಂದು ಕೊನೆಯಿಲ್ಲದ ಕುಣಿತ; ಹೀಗೆ ಯಾವಾಗಲೋ ಹಾದಿ ತಪ್ಪಿ ಒಮ್ಮೆ ಅನಿಸಿರಬಹುದು. 'ಬೆಕ್ಕಿನಸ್ಥಾಂಗೆ' ಒಮ್ಮೆ ರಾಗವೂ ರತಿಯೂ ಸುಳಿಯಬಹುದು. ಆದರೆ ನಿಜವಾಗಿ ಬಾಳುವೆ ಅಸಿಧಾರಾವ್ರತ. ಮಾನವನು ಮುಕ್ಕಣ್ಣ; ತನ್ನ ತೃತೀಯನೇತ್ರ—ಒಳಗಣ್ಣನ್ನು, ಮುಚ್ಚಿ ಯೋಗಭ್ರಷ್ಟನಾಗಿದಾನೆ. 'ಪುನರ್ಯೋಗಾರೂಢ' ನಾಗಬೇಕು. 'ಆತ್ಮಗರುಡ'ನು ಗರಿಗೆದರಿ ಹಾರಬೇಕು. 'We are fallen Angels' ಎಂದು A. E. ಹೇಳಿದ್ದಾನೆ. ಅಲ್ಲಿ ದಪ್ಪನಾಗಿ ಗುರುತು ಮಾಡಿದಾರೆ ಬೇಂದ್ರೆಯವರು ತಮ್ಮ ಪುಸ್ತಕದಲ್ಲಿ. ಜೀವಿಯ ಒಳ ಒಳಗೆ ಅಖಂಡವಾಗ ಬೆಳಕಿದೆ. ಅದು ಹೊರಗೆ ಹರಿಯಬೇಕು. ಪ್ರಕೃತಿ, ಜಗತ್ತು ಆಟದ ಬಯಲಲ್ಲ; ವಿಶ್ವಾತ್ಮನ ಸಂಕೇತ. ಇವರ ಜಗತ್ತಿನಲ್ಲಿ ಕವಿಯು ಯೋಗಾತ್ಮ, ಋಷಿ. ಅವನ ದೃಷ್ಟಿಯೂ ದರ್ಶನವೂ ವೃತ್ತಿಯೂ ಭೋಗವೂ ಎಲ್ಲಾ ಅಲೌಕಿಕ. ಅವನ ಇರುವಿಕೆಯೆ ಬೇರೆ. ಇಹಲೌಕಿಕವೂ ಅಲ್ಲ, ಪಾರಲೌಕಿಕವೂ ಅಲ್ಲ, ಅಲೌಕಿಕ.

ಜ್ಞಾಪಕ ಶಕ್ತಿ ಬಹಳ ಬೇಂದ್ರೆಯವರಿಗೆ. ಸಣ್ಣಪುಟ್ಟ ಸಂಗತಿಗಳನ್ನೂ ಮರೆಯುವ ಹಾಗಿಲ್ಲ. ಕಿವಿಯಲ್ಲಿ ಕೇಳಿದ ಮಾತು, ಕಣ್ಣಲ್ಲಿ ನೋಡಿದ ನೋಟ– ಕಡೆತನಕ ನೆನಪೇ. ಮಾತಿನಲ್ಲಿ ತೂಕ ಹೆಚ್ಚು, ಬಹಳ ಎಚ್ಚರಿಕೆ. ಅಪರಾಧಿಯು ಸಾಕ್ಷಿ ಕಚೇರಿಯಲ್ಲಿ ಕೊಡುವ ಉತ್ತರಗಳಂತೆ ಇವರ ಮಾತು. ಜನರಾಡುವ ಮಾತಿನಲ್ಲಿ ಕೆಲವು ಸಾರೆ ಅಡ್ಡಗೋಡೆಯ ಮೇಲೆ ದೀಪವಿಟ್ಟ ಹಾಗೆ ಇರುತ್ತದೆ ಶಬ್ದಗಳ ಅರ್ಥ. ಅವರಿಗೆ ಅಂಥ ಕಡೆ ಸಂಶಯವೇ ಬರುವದಿಲ್ಲ. ಇವರಿಗೆ ಈ ಮಾರು ಹೆಚ್ಚು ಮಾತು ಕಡಿಮೆಯ ಮಾರ್ಗ ಸರಿಬರುವದಿಲ್ಲ. ಒಮ್ಮೆ ಇವರಿಗೂ ಇವರ ಗುರುತಿನವರೊಬ್ಬರಿಗೂ ಭಾರಿ ಮನಸ್ತಾಪ. ಕಡೆಗೆ ಅವರು ಬಂದು Forget and Forgive– ಮರೆತು ಬಿಡಿ, ಮನ್ನಿಸಿ ಬಿಡಿ– ಎಂದು ಕೇಳಿದರು. ಅದು ಹೇಗೆ ಸಾಧ್ಯ? ಒಳ್ಳೇ ಪೇಚು. ‘ನಡೆದದ್ದನ್ನು ಮರೆಯುವದು ಹೇಗೆ? ಮನ್ನಿಸಲಿಕ್ಕೆ ನಾನೆಷ್ಟರವನು? ಅದೆಲ್ಲಾ ಆಗದು. ನಿಮಗೆ ನನ್ನಗೂಡ ವ್ಯವಹಾರ ಮಾಡುವದು ಬೇಕಿದ್ದರೆ ಅವಶ್ಯ ಆಗಬಹುದು. ಹಳೆಯದೆಲ್ಲಾ ಬದಿಗಿಟ್ಟುಕೊಂಡು, ಹೊಸದಾಗಿ ಮೊದಲು ಮಾಡುತ್ತೇನೆ ವ್ಯವಹಾರ,’ ಅಂದರಂತೆ. ಸತ್ಯದ ಅಭಿಮಾನಿಗಳಿದ್ದಂತೆ ಆತ್ಮಗೌರವದ ಬಗ್ಗೆಯೂ ಅತಿ ಜಾಗರೂಕರು ಇವರು. ಯಾರಿಂದಲೂ ಒಂದು ಮಾತೂ ಆಡಿಸಿಕೊಳ್ಳಲಾರರು. ತಮ್ಮನ್ನು ಸಾಕಿ ಸಲಹಿದ ಸರ್ವೇಶನಾದರೂ ಸರಿಯೆ. ಅವನ್ನು ಗಟ್ಟಿಗೆ ಹಚ್ಚೇ ತೀರಬೇಕು. ಉಪಜೀವನಕ್ಕೇ ಧಕ್ಕೆ ತಗಲಿದರೂ ಅಷ್ಟೆ. ಒಮ್ಮೆ ಅದೂ ಆಗಿ ಹೋಯಿತು; ನೌಕರಿಯನ್ನೇ ಬಿಟ್ಟುಕೊಟ್ಟರು.

ಒಳ್ಳೇ ಸರಸಿಗಳು ಬೇಂದ್ರೆಯವರು. ಹಾಸ್ಯವು ಇವರ ಪಾಲಿಗೆ ಈಸುಗುಂಬಳಕಾಯಿ. ಮಾಸ್ತರರಿಗೆ ಮಣಿಯದ ಮೂರ್ಖ ಹುಡುಗರು ಇರದ ಸಾಲೆ ಇಲ್ಲ. ಸಾಲೆಯಲ್ಲಿ ಇವರಿಗೆ ವಶವಾಗದ ಹುಡುಗರಿಲ್ಲ. ಇವರ ನಗೆಗಾರಿಕೆಯ ಸೆಳೆತ ಅಂಥದು. ಇವರ ಕೈಯಲ್ಲಿ ಕಲಿತವರು ಬಹಳ ಮಂದಿ ಈಗಲೂ ಅವರ ವಿನೋದ ಪ್ರಿಯತೆಯನ್ನು ಮರೆತಿಲ್ಲ. ಜನರ ಸ್ವಭಾವಗುಣಗಳನ್ನು ಗ್ರಹಿಸುವದರಲ್ಲಿ ಇವರಿಗೆ ಒಳ್ಳೇ ಸೂಟಿ. ಆಕಳಿಸಿದರೆ ಹೊಟ್ಟೆಯೊಳಗಿನ ನರಗಳನ್ನೇ ಲೆಕ್ಕ ಹಾಕುತ್ತಾರೆ.

ಜ್ಯೋತಿಷದಲ್ಲಿ ಬೇಂದ್ರೆಯವರಿಗೆ ಹುಚ್ಚು ನಂಬಿಕೆ. ' ಈ ಹೊತ್ತು ನನಗೆ ಇಂಥ ಗ್ರಹ ಕ್ರೂರ !, ಎಂದು ಅವಸರದ ಕೆಲಸಗಳನ್ನು ಬದಿಗಿರಿ ಸಿದ್ದಾರೆ ಒಮ್ಮೊಮ್ಮೆ. ಧಾರ್ಮಿಕ ವಿಷಯದಲ್ಲಿ ಇವರು ಅತ್ತಲೂ ಇಲ್ಲ, ಇತ್ತಲೂ ಇಲ್ಲ, ಅತ್ತಲೂ ಉಂಟು, ಇತ್ತಲೂ ಉಂಟು. ಅತ್ತಗೋಡೆಯ ಮೇಲೆ ದೀಪವಿದ್ದ ಹಾಗೆ. ಇವರ ಉದ್ಧಾರ ನಾಟಕದಲ್ಲಿ ಅಸ್ಪೃಶ್ಯತೆ ಯಿದ್ದಂತೆ. ಸುಧಾರಕರ ಹಾದಿಯಲ್ಲಿ ಇವರ ಗಾಡಿ ಹಾದಿಲ್ಲ; ಸನಾತನಿ ಗಳ ಪಟ್ಟಿಯಲ್ಲೂ ಇವರ ಹೆಸರಿಲ್ಲ. ಸುಧಾರಕರ ಸುಳ್ಳಿಗೆ ಇವರು ಸನಾತನಿಗಳು; ಸನಾತನಿಗಳ ತಿಳಿಗೇಡಿತನಕ್ಕೆ ಸುಧಾರಕರು. ಇದೇ ಇವರ ಬಾಳಿನಲ್ಲಿ ಸುಳಿಯುವ ವಿರಸ; ಈ ಪ್ರತಿಪಕ್ಷನಾಯಕತ್ವದ ಆಯಾಸ.

* * * *

ಕರ್ನಾಟಕವು ಹರಿದು ಹಂಚಿ ಹೋಗಿದೆ, ಒಂದಾಗಿಲ್ಲ. ಮಂಗ ಳೂರಿನ ಮುಂಡಾಸು ಹೈದ್ರಾಬಾದದ ಷೇರ್‌ವಾನಿ– ಒಂದು ಗೋತ್ರ ದವೇ ಅಲ್ಲ. ಮೈಸೂರಿನ ಷರಟೂ ಧಾರವಾಡದ ಪೈರಣೂ ಒಂದೇ ಪೆಟ್ಟಿಗೆಯಲ್ಲಿ ಸೇರುವ ಸಂಭವವಿಲ್ಲ. ಅವರ ಗುರುತು ಇವರಿಗಿಲ್ಲ; ಇವರ ಸುದ್ದಿ ಅವರಿಗಿಲ್ಲ. ಹೀಗಾಗಿ ಕನ್ನಡಕ್ಕೆ ಕಾಂತಿ ಕುಂದಿತು. ಗಡಿನಾಡುಗಳಲ್ಲಿ ಪರಭಾಷೆಗಳ ಪ್ರಭಾವ ಬಹಳ ಆಯಿತು. ಉತ್ತರ ಕರ್ನಾಟಕವು ಗಂಡುಮೆಟ್ಟಿನಭೂಮಿ. ಅದೇ ಮರಾಠಿಗೆ ಬಲಿಯಾಯಿತು. ಸಾಲೆ ಅಯ್ಯಗಳ ಸಾಲೇ ಮಾಯ. ಅಧಿಕಾರಿಗಳೆಲ್ಲ ಮರಾಠಿಗರು. ಶಾಲೆ, ಕಚೇರಿ, ಕಾಗದ ಪತ್ರಗಳವರೆಗೆ ಮರಾಠಿ ಮೆಲ್ಲನೆ ನುಸುಳಿ ಕೊಂಡಿತು. ಕಡೆಗೆ, ಉತ್ತರ ಕರ್ನಾಟಕವು ದಕ್ಷಿಣ ಮಹಾರಾಷ್ಟ್ರ ವಾಯಿತು.

೧೯ನೆ ಶತಮಾನದ ಕಡೆಕಡೆಗೆ ಕನ್ನಡದ ಕೂಗಿಗೆ ಧಾರವಾಡದಲ್ಲಿ ಮೊದಲಾಯಿತು. ಶಾಂತಕವಿಗಳೇ ಅದನ್ನು ಮೊದಲು ಮಾಡಿದವರು. ಅವರ ಕಣ್ಣಿಗೆ ಕರ್ನಾಟಕ ದೇವಿ ಕಂಡು ಬಂದಳು. ಆ ಬಿತ್ತು ಬೇಗನೆ ಬೆಳೆಯಲಿಲ್ಲ. ಕನ್ನಡ ಕನ್ನಡವೆಂದು ಕಡಿದಾಡಿದ ಇನ್ನೂ ಅನೇಕರ ಕೃಷಿ ಬೇಕಾಯಿತು. ಅಂಥವರಲ್ಲಿ ಬೇಂದ್ರೆಯವರ, ಗೆಳೆಯರ ಗುಂಪಿನ

ಹೆಸರುಗಳು ಮುಖ್ಯವಾದವೇ ಸರಿ. ಕನ್ನಡಕ್ಕೆ ಗುಂಪೂ ಬೇಂದ್ರೆಯವ ವರೂ ಮಾಡಿದ ಸೇವೆ ಮರೆಯಲಾರದುದು. ನಾಡಹಬ್ಬ, ವಸಂತೋತ್ಸವ ಶಾಂತಕವಿಗಳ ದಿನ– ಇವು ಮೊದಲಾದಾಗ ಬ್ರಹ್ಮಜ್ಞಾನ ಸಮಾಜದ (Theosophical Society) ಹಣೆಯ ಬರೆಹವಾಗಿತ್ತು ಗುಂಪಿನ ಗತಿ; ಕಮಲದ ಮೇಲಿನ ಹನಿಯಂತೆ, ಯಾರಿಗೂ ಬೇಡಾಗಿ. ಈಗ ಇವು ಹಬ್ಬ ಗಳೆ ಆಗಿವೆ. ಸಾಹಿತ್ಯದಲ್ಲಿ ಸರಳತೆ, ನಿರ್ಭೀತಿತನ, ವಿಚಾರಪ್ರಧಾನತೆಗಳ ಸುಳಿದಾಟಕ್ಕೆ ಅದೇ ಮೊದಲು. ೧೯೨೮ರಲ್ಲಿ ಬಿಜಾಪುರದ ಸಾಹಿತ್ಯ ಸಮ್ಮೇಲನದಲ್ಲಿ ಗುಂಪಿಗೆ ಸ್ವರೂಪ ಬಂತು. ಆ ಸಮ್ಮೇಲನ ಒಂದು ರೀತಿಯಲ್ಲಿ ಗುಂಪಿನ ಪ್ರಾರಂಭೋತ್ಸವವೆಂದು ಹೇಳಿದರೆ ಕಾದಿಟ್ಟ ಗುಟ್ಟು ರಟ್ಟಾದಂತೆ. ಅಂದಿನಿಂದ ಇಂದಿನ ವರೆಗೆ ಗುಂಪಿನ ಗುಡಿ ಹಾಗೇ ಹಾರುತ್ತಿದೆ;

"ಇದ್ದ ಸಂಗತಿ ಹೀಗೆ. ೧೯೧೪ರಲ್ಲಿ ಕೈಬರೆಹದ 'ಕರ್ನಾಟಕ ಮಿತ್ರ' ಪತ್ರಿಕೆ ಕೆಲ ತಿಂಗಳು ಹೊರಡಿಸಿದ್ದೆ ನಾನು. ೧೯೧೬ರಲ್ಲಿ ಮೊದಲ ಕವಿತೆ ಬರೆದೆ. ಸರ್ವಜ್ಞ, ಲಕ್ಷ್ಮೀಶ ಇವರು ನನ್ನ ಪ್ರೀತಿಯವರು ಮೊದಲಿನಿಂದಲೂ. ಮ್ಯಾಟ್ರಿಕ್‌ನಲ್ಲಿ ಕನ್ನಡ ವಿಷಯದಲ್ಲಿ ಮೊದಲ ನಂಬರು ಬಂದಿದ್ದೆ ಶಾಲೆಯ ಪರೀಕ್ಷೆಯಲ್ಲಿ. ೧೯೧೭ರಲ್ಲಿ 'ತುತೂರಿ' ಯನ್ನು ಪುಣೆಯ ಕರ್ನಾಟಕ ಸೋಶಲ್ ಕ್ಲಬ್ಬಿನಲ್ಲಿ ಓದಿದೆ; ಡೆಕ್ಕನ್ ಕಾಲೇಜ ಕನ್ನಡ ಸಂಘದ ವಾರ್ಷಿಕೋತ್ಸವ ಕಾಲದಲ್ಲಿ ಕನ್ನಡ ಕವಿತೆಗಳನ್ನೋದಿದೆ. ಆರ್. ಜಿ. ದೇಶಪಾಂಡೆ, ಮಂಗಳವೇಢೆ, ಮೋಹರೆ, ಸಾಲಿ ಆಗ ಅಲ್ಲಿದ್ದರು. ೧೯೧೮ರ ಸಾಹಿತ್ಯ ಸಮ್ಮೇಲನದಲ್ಲಿ ನನ್ನ ಕವಿತೆಗಳನ್ನು ಕೇಳಲು ಎರಡು ಸಂತೋಷಕೂಟಗಳಾದವು. ಬಿ. ರಾಮ ರಾಯರು, ಚೆನ್ನಕೇಶವಯ್ಯಂಗಾರರು, ಕೃಷ್ಣಮೂರ್ತಿಯ ರಾಜ ಗೋಪಾಲ ಕೃಷ್ಣರಾಯರೂ, ತಿರುಮಲಾಂಬಾ, ಆರ್. ತಾತಾಚಾರ್ಯ ಈ ಜನ ಇದ್ದರು. ನಾನಾಗ ಶಾಲೆಯಲ್ಲಿ ಶಿಕ್ಷಕನಾಗಿರಲಿಲ್ಲ. ೧೯೧೮ ಜೂನದಲ್ಲಿ ನಾನು ಶಿಕ್ಷಕನಾದೆ." ಬೇಂದ್ರೆಯವರು ನನಗೊಮ್ಮೆ ಹೀಗೆ ತಿಳಿಸಿದ್ದರು.

ಶಿಕ್ಷಕರಾದ ಮೇಲೆ, ತಮ್ಮ ವಿದ್ಯಾರ್ಥಿಗಳಲ್ಲಿ ಗೆಳೆತನ ಬೆಳೆಸು

ವದು ಬೇಂದ್ರೆಯವರಿಗೆ ಸಹಜವಾಗಿ ತೋರಿತು. ಆಗಲೇ ಗುಂಪಿನ ಜನ್ಮ. ಗುಂಪಿನ ತುದಿಮೊದಲಿಲ್ಲದ ಹರಟೆಗೆ ಪ್ರಾರಂಭ, ಹೊರಗಿನಿಂದಲೂ ಕೆಲವರು ಹಿರಿಯರು ಬಂದು ಕೂಡಿಕೊಂಡರು. ಹೋದಲ್ಲಿ ಬಂದಲ್ಲಿ ಅದೊಂದು ಗಿಳಿವಿಂಡು. ಬೆಳಗಾವಿಯಲ್ಲಿ, ೧೯೨೯ರಲ್ಲಿ ಸಾಹಿತ್ಯ ಸಮ್ಮೇಲನ ನೆರೆದಿತ್ತು. ಗುಂಪು ಅಲ್ಲಿಗೆ ಹೋಗಿತ್ತು. ಇವರ ವ್ಯವಹಾರದಲ್ಲಿ ಇವರು ಬೇರೆಬೇರೆ ಅನ್ನುವ ಹಾಗಿರಲಿಲ್ಲ. ಎಲ್ಲಾ ಒಂದೇ ಜೀವ. ಊಟದಲ್ಲಿ ಒಂದೇ ಸಾಲು, ಮಲಗಲು ಒಂದೇ ಹಾಸಿಗೆ, ಇಳಿದದ್ದು ಒಂದೇ ಕೋಣೆ- ಬೇರೆ ತೆರವಿದ್ದವು.- ಕವಿತಾ ವಾಚನದಲ್ಲಿ ಒಂದೇ ಧಾಟಿ, ಬರೆಹಗಳಲ್ಲಿ ಒಂದೇ ಶೈಲಿ, ಒಂದೇ ರೀತಿಯ ಕವಿಸಮಯ. ಸಮ್ಮೇಲನದಲ್ಲಿ ಗುಂಪಿನವರು ಒಂದೆರಡು ನಿಬಂಧಗಳನ್ನು ಓದಿದರು. ಯಾರು ಬರೆದರು, ಯಾರು ಓದಿದರು ಎಂಬದೇ ತಿಳಿಯಲಿಲ್ಲ. ಎಲ್ಲಕ್ಕೂ ಇಷ್ಟೇ ಉತ್ತರ; ಗೆಳೆಯರಗುಂಪು. ಅದೊಂದು ಸೋಜಿಗ. ಬಳ್ಳಾರಿಯಿಂದ ನನ್ನ ಗುರುತಿನ ವಕೀಲರೊಬ್ಬರು ಬಂದಿದ್ದರು. 'wonderful fellows these, they seem to have no individual existence; It is all one corporate existence" ಎಂದರು. ಅಂತೇ ಕನ್ನಡ ನಾಡಿನಲ್ಲಿ ಗುಂಪಿನ ಮರಿಗಳು ಬೇಕಾದಷ್ಟು ಹುಟ್ಟಿಕೊಂಡವು.

ಪ್ರತಿಭೆ ಹೊಟ್ಟೆಕಿಚ್ಚಿನ ಹೆಣ್ಣು. ಜೋಡಿ ಕೂಡದ ಖೋಡಿ. ಎಂದು ಪ್ರತೀತಿ ಜಗದಲ್ಲಿ. ತಿಳಿಗಣ್ಣಿಗೆ ಹಾಗಲ್ಲ. Genius attracts Genius ಎಂದ A. E. ಆದೇ- ಆ ಆಸೆಯೇ ಗುಂಪಿನ ತಳಹದಿ, ಗುರಿ. ಸದ್ಯದ ಸ್ಥಿತಿಯಲ್ಲಿ ಗುಂಪು ಗ್ರಸ್ತವಾಗಿದೆಯೆಂದು ಕೇಳಿದ್ದೇನೆ. ಕೆಲವರು ಗುಂಪು ಮೂಲೆಗುಂಪಾಯಿತೆಂದೂ ಅನ್ನಲು ಹಿಂದೆಗೆದಿಲ್ಲ. ಬೇಂದ್ರೆಯವರು ಗೆಳೆಯ ಮಧುರ ಚೆನ್ನರಿಗೆ ಬರೆದ ಪತ್ರವೊಂದರಲ್ಲಿ ಹೀಗಿತ್ತು. "ಸೋಲು ಹುಂಬರ ಗುಲ್ಲು! ಗೆಲವು ಕಾಂಬರಸೊಲ್ಲು!" ಗುಂಪಿನ ಒಗ್ಗೆ ಈಗ ಅದು ನಿಜವೆಂದು ಅನಿಸುತ್ತದೆ.

ಗುಂಪಿನವರು ಮಾಡಿದ ಕನ್ನಡದ ಸೇವೆಯ ಹಿರಿಗುರುತು 'ಗರತಿಯ ಹಾಡು', ದೇಶೀ ಮಾರ್ಗದ ಕವಿತೆ ದೇಶದ ಅಂತರಂಗ, ಅಂತಃಕರಣ, ಜೀವಾಳ. ಅಂತೇ ಜನಪದ ಸಾಹಿತ್ಯಕ್ಕೆ ದೊರೆತ ಪ್ರೋತ್ಸಾಹ ಕವಿತೆಯ

ಪುನರುಜ್ಜೀವನದ ಬಿತ್ತು. ಎಲ್ಲ ಕಾಲದಲ್ಲೂ ಹೀಗೇ, ಎಲ್ಲ ನಾಡಿನಲ್ಲೂ ಅಷ್ಟೇ. ಕನ್ನಡನಾಡಿನಲ್ಲೂ ಈ ಬಿತ್ತು ನೊಳಕೆಯೊಡೆದಿದೆ. ಹಳ್ಳಿಯ ಹಾಡುಗಳೂ ಬೇಂದ್ರೆಯವರೂ ಸ್ಪರ್ಧೆಗೆ ನಿಂದಿದಾರೆ. ಹಳ್ಳಿಯ ಹಾಡುಗಳಲ್ಲಿ ಸಾಹಿತ್ಯ ಸಾರವನ್ನೇ ಬೆರೆಸುವ, ಜಾನಪದ ವೇದವನ್ನೇ ನುಡಿಸುವ ಹಟ ಕವಿಯದು. ಕವಿಯನ್ನು ವಿಚಾರ ಪ್ರಧಾನತೆಯ ರೀತಿಯಿಂದ ರಸ, ರೂಪಗಳ ಹಾದಿಗೆ ತರುವ ಹಟ ಹಾಡಿನದು. ಎರಡೂ ಕಡೆಗಳಲ್ಲೂ ಗೆಲವು ಗೊತ್ತೇ ಆದ ಮಾತು. ಎರಡು ಕಡೆಗಳಲ್ಲೂ ಸೋಲು ತಪ್ಪಿಸಲಾರದ ಸಂತೋಷ. ಇವರಿಬ್ಬರ ಸೋಲುಗೆಲವಿನ ಆಟದಲ್ಲಿ ಸಾಹಿತ್ಯದ ಸೌಭಾಗ್ಯ.

* * * *

ಗುಂಪಿನ ಹರಟೆ ಎಂದೆನಲ್ಲ. ಹರಟೆ ಅಂದರೆ ಬೇಂದ್ರೆಯವರಿಗೆ ಅನ್ನ ನೀರು. ಮಾತಿಗೆ ಕೂತರೆ ಮನೆಯೊಳಗಿನವರ ಅವಸ್ಥೆ ಅವರಿಗೇ ಗೊತ್ತು. ಗುಂಪಿನದೊಂದು ವಿಲಕ್ಷಣತೆ. ಸಂಜೆಗೆ ಎಲ್ಲರೂ ಗೂಡು ಸೇರಿದರೆಂದರೆ ಮಾತಿಗೆ ಮೊದಲು, ರಾತ್ರಿಯೆಲ್ಲ ಮಾತು, ಮಾತು. ಮೊದಲಿಲ್ಲ. ಕೊನೆಯಿಲ್ಲ, ಬೇಸರವೂ ಇಲ್ಲ. ಒಂದು ಸುದ್ದಿಯಲ್ಲ, ಒಂದು ಶಾಸ್ತ್ರವಲ್ಲ. ಒಂದು ಸಲ ರಾತ್ರಿ ಮೂರು ಗಂಟೆಯ ರೈಲಿಗೆ ಧಾರವಾಡಕ್ಕೆ ಹೋಗಿದ್ದೆ. ಬೇಂದ್ರೆಯವರ ಮನೆಮುಂದೆ ಕುದುರೆ ಗಾಡಿ ನಿಂತಿತು. ಕರೆದೂ ಕರೆದೂ, ಕೂಗಿ ಕೂಗಿ ಸಾಕಾಯಿತು. ಈ ಗಂಟಲು ಕಸರತ್ತು ಅರ್ಧಗಂಟೆಯಾಯಿತು. ಒಳಗಿನಿಂದ ಮಾತಿನ ಸಪ್ಪಳ ಕೇಳುತದೆ. ಬಾಗಿಲು ಮಾತ್ರ ತೆರೆಯಲಿಲ್ಲ. ಕಡೆಗೆ ನೆರೆಮನೆ ಜಗಲಿಯ ಮೇಲೆ ಟವೆಲು ಹಾಸಿ ಮಲಗಿದೆ. ಡಿಸೆಂಬರ ತಿಂಗಳ ಛಳಿ. ಅದರಲ್ಲೂ ಧಾರವಾಡ. ಕೇಳಬೇಕೆ? ರಾತ್ರಿಯೆಲ್ಲಾ ಜಾಗರಣೆ.

ಮಾತು ಬಹಳ ಅಂದರೆ ಕಾಡು ಹರಟೆಯಲ್ಲ. ಅದರಲ್ಲಿ ತಥ್ಯವಿತ್ತು. ಗೆಳೆಯ ಗೋಕಾಕರು ಹೀಗೆ ಅದರ ಬಗ್ಗೆ ಅಂದಿದಾರೆ. "ಸಂಜೆ ಸೊಂಪಾಗಿತ್ತು, ಇಬ್ಬರೂ ಅವರ ಮನೆಗೆ ಹೋದೆವು. ಬೇಂದ್ರೆಯವರ ಗುರುತು ಆಯಿತು. ನನ್ನ ಕವನಗಳನ್ನು ಓದಿದೆ. ಶಾಂತವಾಗಿ ಕೂತಿದ್ದರು ಕೇಳುತ್ತ ಬೇಂದ್ರೆಯವರು. ಓದುವದು ಆದ ಮೇಲೇ ಅವರು ಮಾತಾ

ಹಿದ್ದು. ಆ ಮಾತಿನಲ್ಲಿ ಮೂರು ತಾಸಾದರೂ ತಿಳಿಯಲಿಲ್ಲ. ಮಾಡಿದ ಅಡಿಗೆ ಆರಿಹೋಗಿತ್ತು. ಕಾದು ಬೇಸತ್ತು ಅವರ ಹೆಂಡತಿಯ ಮೋರೆ ಗಂಟಾಗಿತ್ತು. ಬೇಂದ್ರೆಯವರಿಗೆ ಅದರ ಪರಿವೆಯೇ ಇರಲಿಲ್ಲ. ಅಡಿಗೆ ಊಟ, ಮನೆಮಾರು, ಜೀದಿ ಬಯಲು ಯಾವದೂ ಅವರಿಗೆ ನೆನಪಿರಲಿಲ್ಲ. ಇದೆಲ್ಲ ದಾಟಿ ನೆಟ್ಟಗೆ ನುಗ್ಗಿತ್ತು ನಭೋಮಂಡಲಕ್ಕೆ ಅವರಭಾವನೆ. ಆ ತಾತ್ತ್ವಿಕ ಸಂಭಾಷಣೆ ಒಂದು ಜೇಡನ ಬಲೆಯಂತೆ. ಅದರಲ್ಲಿ ಸಿಕ್ಕಿ ನೇತಾಡುತ್ತಿತ್ತು ನನ್ನ ಜೀವ. ಮಾತು ಮುಗಿದು ಮನೆಗೆ ಹೊರಟಾಗ ನಾನು ನಾನಾಗಿರಲಿಲ್ಲ. ಏನೋ ಬಹಳ ಬದಲಾಗಿದ್ದೆ. ಮೈ ಮಣ್ಣು ಗೂಡಿದ ಮೇಲೂ ನನ್ನ ಜೀವ, ಆ ದಿನದ ಮಾತುಕತೆಯನ್ನು ಮರೆಯಲಿಕ್ಕಿಲ್ಲ. ಗುಂಪಿನ ಈ ಹರಟೆಯೇ ನನ್ನ ಬಾಳುವೆಗೆ ಒಂದು ರೂಪು ಕೊಟ್ಟಿತು.''

'ಹುದುಗಲಾರದ ದುಃಖ'ವೊಂದು ಬೇಂದ್ರೆಯವರ ಮೋರೆಯಲ್ಲಿ ಕಾಣುತ್ತದೆ; ಅವರು ಮನಸಾರೆ ನಗುವದು ಅಪರೂಪ. ಸಕ್ಕರೆ 'ಅಳು ನುಂಗಿ ನಕ್ಕಂತೆ.' ನೋವಿನ ಅನುಭವ 'ಕಣ್ ಒಳಗ ಪೊರಳೀಸಿ'ದೆ. ಜೀವನದ ಸವಿ ತಿಳಿಯದು ಎಂದಲ್ಲ. ಅವರ ಕವಿತೆಯಲ್ಲಿ ಅದು ಬೇಕಾದ ಹಾಗೆ ಕಾಣಬರುತ್ತದೆ. ಅವರ ಮಾತೃಪ್ರೇಮ ಬಹಳ ಬೆಲೆಯದು. ತಾಯಿಯೆಂದರೆ ನಿಜವಾಗಿ ದೇವಿ.ಬಾಳಬಾನಿನ ಚುಕ್ಕೆ. ಅಂಬಿಕಾತನಯ ದತ್ತ ಎಂಬ ಕಾವ್ಯನಾಮ ಬೇಂದ್ರೆಯವರು ತಾಯಿಗೆ ಸಲಿಸಿದ ಮುಡುಪು. ಸಾಧಾರಣವಾಗಿ ಬೇಂದ್ರೆಯವರ ಜೀವನದಲ್ಲಿ ಮಮತೆ, ಹೆಣ್ಗರುಳು ಕಾಣಬರುವದಿಲ್ಲ. ಅವರ ವಿಚಾರಪರತೆ, ಗಾಂಭೀರ್ಯ ಹೆಣ್ಗರುಳಿಗೆ ಎಡೆಕೊಡುವದಿಲ್ಲ. ಅಷ್ಟು ಮುಸುಕಿಕೊಂಡಿದೆ. ಮಿದುತನವನ್ನು ಮರೆಮಾಡಿದೆ. ೧೯೩೨ರಲ್ಲಿ ಗೆಳೆಯನೊಬ್ಬನಿಗೆ ಅವರೊಂದು ಪತ್ರ ಬರೆದಿದ್ದರು. '' ಪತ್ರವೇಕಿಲ್ಲ? ಮೌನವೇಕೆ? ಕಾರ್ಯ ಬಾಹುಳ್ಯವೋ? ತಾತ್ಸಾರವೋ? ತಿರಸ್ಕಾರವೋ? ಉದಾಸೀನತೆಯೋ? ಚಾಂಚಲ್ಯವೋ? ಏನು? ........ ಒಲವೆ, ಯಾವನಾದರೊಬ್ಬ ದೇವಪುರುಷನು ಪ್ರತ್ಯಕ್ಷವಾಗಿ ವರ ಬೇಡೆಂದು ಕೇಳಿದರೆ,....ನ ಕಡೆಯಿಂದ ಪತ್ರ ಬರಲಿ ಎಂದು ಕೇಳುವೆ, ಮೌನವೇಕೆ? ಮಾರೋಲೆ ಬರಲಿ.''

ಮೊನ್ನೆ ಮೊನ್ನೆ ಈ ಪತ್ರ ಉಳಿದ ಗೆಳೆಯರ ಕಣ್ಣಿಗೆ ಬಿತ್ತು. ಎಲ್ಲರಿಗೂ ಕಣ್ಣು ಅಗಲವಾಯಿತು. ಒಮ್ಮೆ 'ಮಾತಿನ ಮಾಲೆ'ಯೊಂದು ಕಳಿಸಿದ್ದರು ಕಪಿಗಳು ಗೆಳೆಯರಿಗೆ. ಮುಸುಕಿದ ಮಿದುತನ ಮಿಸು ಮಿನುಗಿತ್ತು ಅಲ್ಲಿ.

ಗದ್ಗರಿಸಿ ಗಂಡು ದನಿಯಿಂದ ಚೇತರಿಸುವೆನು ಬಿದ್ದಿರಲು ನಿನ್ನ ತನುವ
ಮುದ್ದಿರಿಸಿ ಹೆಂಗರುಳಿನಂತರಳ ಹಚ್ಚುವೆನು ಮುಗಿದಿರಲು ನಿನ್ನ ಮನವಾ।
ನಿನ್ನ ಲೇಖನಿಯಾಗಿ, ನಿನ್ನ ಪೇಯವದಾಗಿ, ನಿನ್ನ ಕರ ಮುಕುರವಾಗಿ
ನಿನ್ನ ತನು ತನುವಾಗಿ, ಕುಣಿವ ನಾಲಿಗೆ, ನನ್ನಿಗರೆವವಳಿಕಂಗಳಾಗಿ।
ನಿನ್ನ ಪ್ರೀತಿಯಮೂತಿ, ನಿನ್ನ ಬೆಡಗಿನ ಗೆಳತಿ, ತವ ಸ್ನೇಹ ಸಖಿಯದಾಗಿ
ನಿನ್ನ ಕರುಳಿನ ಕೆಳೆಯು, ನಿನ್ನ ಮಾತಿನ ಕಳೆಯು, ತವ ಸಂಗ ಸುಖಿತನಾಗಿ।
ಭೋಗಿ ಜೀವವೇ ! ನಿನ್ನ ಹುರುಪುಳ್ಳ ಹುರುಳುಳ್ಳ ಹರಟೆಯಾಗಿ
ಸಾಗಿ ಸಂಗಡ ಬರುವೆ– ಯೋಗಿ ಜೋಗಿಯು ಆಗು– ನಿನ್ನ ಕೈ ಪರಟೆಯಾಗಿ।
ನಿನ್ನ ಜೀವಪ ಬೊರೆಯು, ನಿನ್ನ ಭಾವದ ಗುರಿಯು, ಸುಸ್ಫೂರ್ತಿ ಝುರಿಯು ಆಗಿ
ನಿನ್ನ ಕಾವ್ಯದ ತೊರೆಯು, ನಿನ್ನ ಕೀರ್ತಿಯ ಪರೆಯು, ಸ್ವಾನಂದ ಲಹರಿಯಾಗಿ।
ಹಡೆದ ತಾಯಿಯು ಆಗಿ, ಪಡೆದ ಮಡದಿಯದಾಗಿ, ಜೀವದೊಡನಾಡಿಯಾಗಿ
ಬಿಡದ ಗೆಳೆಯನು ಆಟವಾಡಲನುವಾಗಿಹೆನು ಲೀಲಾವತಾರಿಯಾಗಿ ॥

ಇವರಿಗೂ ಮಾಸ್ತಿಯವರಿಗೂ ಒಳ್ಳೇ ಗೆಳೆತನ. ಗೆಳೆತನದಲ್ಲಿ ಪರಸ್ಪರವಾಗಿ ಸ್ವಭಾವ ಗುಣಗಳಲ್ಲಿ ಹೆಚ್ಚು ಕಡಿಮೆಯಾಗುವದುಂಟು. ಅಂದರೆ ಅವರ ಗುಣದ ಗಾಳಿ ಇವರಿಗೆ ಬಡಿಯುವದು, ಇವರ ಸ್ವಭಾವದ ಸೆಳೆತಕ್ಕೆ ಅವರು ಸಿಗುವದು. ಮಾಸ್ತಿ, ಬೇಂದ್ರೆಯವರ ಜೋಡಿಯಲ್ಲಿ ಬಹಳ ವಿಲಕ್ಷಣತೆಯಿದೆ. ಬೇಂದ್ರೆಯವರು ಜಾತಿಯಿಂದ ಕೊಂಕಣಸ್ಥ ಮಹಾರಾಷ್ಟ್ರರು. ಮಿತವ್ಯಯ, ದೀರ್ಘದೃಷ್ಟಿ, ಕಾರ್ಯಸಾಧಕತೆ, ತಂತ್ರಗಳಿಗೆ ಕೊಂಕಣಸ್ಥರು ಗೋತ್ರ ಋಷಿಗಳು. ಬೇಂದ್ರೆಯವರಲ್ಲಿ ಮಿತವ್ಯಯವೊಂದೇ; ಉಳಿದುದೆಲ್ಲ ಧಾರವಾಡೀ. ಮಾಸ್ತಿಯವರು ಮೈಸೂರಿನ ಸೌಜನ್ಯದ ಮಾದರಿ. 'ಕಾಣದ ಬೆಲೆ' ಕಾಣುವ ಹಟ, ಮಾತಿನಲ್ಲಿ ಬರೆಹದಲ್ಲಿ ಸಹಿಸಲಾರದ ಸಂಕೋಚ, ಅವರದು. ಅವರ ಮಾತಿನಿಂದ ಮನನೊಂದವರು 'ಮಸಲಾ' ಜಾತಿಯಲ್ಲೂ ಸಿಗುವದಿಲ್ಲ. ಅಷ್ಟು ಮೃದು. ಬೇಂದ್ರೆಯವರಲ್ಲಿ ಧಾರವಾಡದ ದಿಟ್ಟತನವಿದೆ. ಅನಿಸಿದ್ದನ್ನು

ಆಡುವ ಗಡುಸುತನವಿದೆ. ವಾದಕ್ಕೆ ಹಿಂದೆಗೆಯುವ ಹಾಗಿಲ್ಲ. ಮಾಸ್ತಿಯವರು ವಾದಕ್ಕೆ ಎಂದೂ ಸಿಗುವದಿಲ್ಲ. ಮಾಸ್ತಿಯವರು 'ಬಡವರ ಬಗ್ಗರ ಬರಿ ತುತ್ತಿನ ಚೀಲ' ನೋಡಿ ಕರಗಿ ಹೋಗುತ್ತಾರೆ. ಬೇಂದ್ರೆಯವರಿಗೆ ಕರುಳು ಕುದಿಯುತ್ತದೆ. ಸತ್ಯಂಬ್ರೂಯಾತ್ ಸಾಲಿನವರು ಇವರು. ಪ್ರಿಯಂಬ್ರೂಯಾತ್ ಪಂಥದವರು ಮಾಸ್ತಿ. ಎರಡೂ ಮೇಳಗೂಡಬೇಕು. ಸವಿಯಿಲ್ಲದ ಸತ್ಯ ಸಟೆ. ಸತ್ಯವಲ್ಲದ ಸವಿಯೂ ಸಟೆಯೇ. ಮೇಳನದಲ್ಲಿದೆ ಪೂರ್ಣತೆ.

ಬೆಳಗಾಂವಿಯ ಸಾಹಿತ್ಯ ಸಮ್ಮೇಲನದಲ್ಲಿ ಮೊದಲು ಕನ್ನಡ ನಾಡಿಗೆ ಬೇಂದ್ರೆಯವರ ಪರಿಚಯ. 'ಹಕ್ಕಿ ಹಾರುತಿದೆ ನೋಡಿದಿರಾ' ಎಂಬ ಅವರ ಕವನಕ್ಕೆ ಆ ಕೀರ್ತಿ. ಅಂದಿನವರೆಗೆ ಬೇಂದ್ರೆಯವರ ಹೆಸರು ಬೆಂಗಳೂರಿನ ವರೆಗೆ ಹರಡಿರಲಿಲ್ಲ. ಅಲ್ಲಿಯತನಕ ಅವರು ಧಾರವಾಡದ ಕವಿಗಳು, ಉತ್ತರದವರು. ಅಂದು ಅಖಿಲ ಕರ್ನಾಟಕದ ಮುದ್ರೆ ಬಿತ್ತು ಅವರ ಹೆಸರಿಗೆ. ಆದರೇನು? ಮಾಸ್ತಿಯವರು ಅಂದದ್ದು ಅನುಭವದ ಸತ್ಯ.

"ಅನ್ಯ ದೇಶೀಯರಿಂದ ಗೌರವ ಹೊಂದಿದ ಮೇಲೆಯೇ ನಮ್ಮ ಜನರ ಮನಸ್ಸನ್ನು ನಾವು ತಿಳಿಯುತ್ತೇವೆ. ಹಾಗೆಯೇ ಆದಷ್ಟು ಪ್ರಯತ್ನಪಟ್ಟು ಇವರ ಪದ್ಯಗಳನ್ನು ಇಂಗ್ಲಿಷಿಗೆ ಭಾಷಾಂತರ ಮಾಡಿ ಪ್ರಕಟಿಸಿದರೆ, ಆಗ ಅನ್ಯದೇಶೀಯರಿಂದ ಇವರಿಗೆ ಸಿಗುವ ಗೌರವವನ್ನು ನೀವೇ ನೋಡುವಿರಿ; ಆಗ ಇವರನ್ನು ತಿಳಿಯದಿರುವ ಕನ್ನಡಿಗರಿಗೆ ಇವರ ಮಹತ್ತು ತಿಳಿಯುವದು."